# ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯ - ಒಂದು ಸಾಂಸ್ಕೃತಿಕ ಅಧ್ಯಯನ

ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಎಂ. ಫಿಲ್ ಪದವಿ
(ಸಮಾಜ ವಿಜ್ಞಾನ ನಿಕಾಯ) ಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕಿ
ಪಮೀದ ಬೇಗಂ

ಮಾರ್ಗದರ್ಶಕರು
ಡಾ. ಪೀಟರ್ ವಿಲ್ಸನ್ ಪ್ರಭಾಕರ್

೨೦೦೮

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತಾ ಕೇಂದ್ರ
ಬಲ್ಮಠ, ಮಂಗಳೂರು – ೫೭೫ ೦೦೧

# ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯ - ಒಂದು ಸಾಂಸ್ಕೃತಿಕ ಅಧ್ಯಯನ

ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಎಂ. ಫಿಲ್ ಪದವಿ
(ಸಮಾಜ ವಿಜ್ಞಾನ ನಿಕಾಯ) ಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ




ಸಂಶೋಧಕಿ
**ಪಮೀದ ಬೇಗಂ**

ಮಾರ್ಗದರ್ಶಕರು
**ಡಾ. ಪೀಟರ್ ವಿಲ್ಸನ್ ಪ್ರಭಾಕರ್**



೨೦೦೮

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತಾ ಕೇಂದ್ರ
ಬಲ್ಮಠ, ಮಂಗಳೂರು – ೫೭೫ ೦೦೧

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯ – ಒಂದು ಸಾಂಸ್ಕೃತಿಕ ಅಧ್ಯಯನ ಶೀರ್ಷಿಕೆಯ ಮಹಾಪ್ರಬಂಧವು ಈ ಸಂಶೋಧಕಿಯ ಸ್ವತಂತ್ರ ಕೃತಿಯಾಗಿದ್ದು ಕ್ಷೇತ್ರಕಾರ್ಯ, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರದಲ್ಲಿ ಡಾ. ಪೀಟರ್ ವಿಲ್ಸನ್ ಪ್ರಭಾಕರ್‌ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಮಹಾಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೊಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ – ಮಂಗಳೂರು – ೫೭೫೦೦೧
ದಿನಾಂಕ: ೨೨.೦೮.೨೦೦೮

ಪಮೀದ ಬೇಗಂ

# ಯೋಗ್ಯತಾ ಪತ್ರ

ಪಮೀದ ಬೇಗಂ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ 'ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯ – ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವು ಸಂಶೋಧಕರ ಸ್ವಂತ ಕ್ಷೇತ್ರಕಾರ್ಯ, ಅಭಿಪ್ರಾಯ ಸಂಗ್ರಹ, ಸಂದರ್ಶನ, ಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಈ ಮಹಾ ಪ್ರಬಂಧ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಡಾ.ಪೀಟರ್ ವಿಲ್ಸನ್ ಪ್ರಭಾಕರ್
ಸಂಶೋಧನ ಮಾರ್ಗದರ್ಶಕರು

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ – ಮಂಗಳೂರು – ೫೭೫೦೦೧
ದಿನಾಂಕ: ೨೭.೦೮.೨೦೦೮

# ನೆನಕೆ

'ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯ – ಒಂದು ಸಾಂಸ್ಕೃತಿಕ ಅಧ್ಯಯನ' ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರದಡಿಯಲ್ಲಿ ನಡೆಸಿದ ಕಾಲಬದ್ಧ ಸಂಶೋಧನೆ. ಈ ಸಂಶೋಧನ ಕಾರ್ಯಕ್ಕೆ ಎಲ್ಲ ಬಗೆಯ ವ್ಯವಸ್ಥಾಪನ ನೆರವು ನೀಡಿದವರು ಹಂಪಿ ಕನ್ನಡ ವಿಶ್ವವಿದ್ಯಾನಿಲಯ ಹಾಗೂ ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ. ಈ ಎರಡೂ ಪ್ರೇರಕ ಕೇಂದ್ರಗಳನ್ನು ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಮಹಾಪ್ರಬಂಧ ರಚನೆಯ ಸಂದರ್ಭದಲ್ಲಿ ಮಾರ್ಗದರ್ಶಕರಾಗಿ ನನಗೆ ಸೂಕ್ತ ಸಲಹೆ ಸೂಚನೆ ನೀಡುತ್ತಾ ಬಂದವರು ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರದ ಪ್ರಾಧ್ಯಾಪಕ ಡಾ.ಪೀಟರ್ ವಿಲ್ಸನ್ ಪ್ರಭಾಕರ್‌ರವರು. ಅವರಿಗೆ ನನ್ನ ವಿಶೇಷ ವಂದನೆಗಳು. ಆಡಳಿತಾತ್ಮಕ ಸಹಕಾರ ನೀಡಿ ನನ್ನ ಸಂಶೋಧನೆಗೆ ಪೂರ್ಣ ಬೆಂಬಲ ನೀಡಿದವರು ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರದ ನಿರ್ದೇಶಕ ಡಾ.ಎ.ವಿ.ನಾವಡರು. ಅವರನ್ನು ಗೌರವಪೂರ್ವಕ ಸ್ಮರಿಸಿಕೊಳ್ಳುತ್ತಿದ್ದೇನೆ. ಕರ್ನಾಟಕ ತಿಯೋಲಾಜಿಕಲ್ ಕಾಲೇಜಿನ ಪ್ರಾಂಶುಪಾಲರಾದ ರೆವೆ/ಡಾ/ಜೆ.ಎಸ್. ಸದಾನಂದರು ನನಗೆ ಸಹಕಾರ ನೀಡಿದ್ದಾರೆ. ಅವರಿಗೂ ನನ್ನ ಹೃತ್ಪೂರ್ವಕ ನಮನಗಳು.

ಈ ಸಂಶೋಧನೆ ಮಾಡಲು ನನ್ನನ್ನು ಹುರಿದುಂಬಿಸಿ ಪ್ರೇರಣೆ ನೀಡಿದ ಮುಲ್ಕಿಯ ವಿಜಯಾ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಜೋಶಿಯವರಿಗೆ, ಆಡಳಿತ ಮಂಡಳಿ, ಗ್ರಂಥಪಾಲಕರು ಮತ್ತು ಗ್ರಂಥಾಲಯದ ನೌಕರ ವರ್ಗ, ತಿಯೋಲಾಜಿಕಲ್ ಕಾಲೇಜಿನ ಗ್ರಂಥಪಾಲಕರು ಮತ್ತು ನೌಕರವರ್ಗ ಎಲ್ಲರನ್ನೂ ನಾನು ನೆನಪಿಸಿಕೊಳ್ಳುತ್ತಿದ್ದೇನೆ.

ನನ್ನ ಸಂಶೋಧನೆಯ ಸಮಯದಲ್ಲಿ ಮನೆಯ ಹೊರೆಯನ್ನು ಇಳಿಸಿ ಎಲ್ಲಾ ರೀತಿಯ ಸಹಾಯ ಸಹಕಾರವನ್ನು ನೀಡಿದ ನನ್ನ ಪತಿ ಎಚ್. ಮನ್ಸೂರು ಮತ್ತು ಮಕ್ಕಳಿಬ್ಬರಿಗೂ,

ಸಂದರ್ಶನದ ಮೂಲಕ ವಿಷಯ ಸಂಗ್ರಹಕ್ಕೆ ನನ್ನೊಂದಿಗೆ ಬಂದ, ನನ್ನ ತಂದೆ ಬಿ.ಎಂ.ಸಲಾವುದ್ದೀನ್ ಮತ್ತು ತಾಯಿ ಮೈಮುನಾರವರಿಗೆ ನನ್ನ ನೆನಕೆಗಳು.

ಸಂಶೋಧನೆಯ ಮಾಹಿತಿ ಸಂಗ್ರಹ ಹಂತದಲ್ಲಿ ಪ್ರಶ್ನೆ, ಚರ್ಚೆಯಲ್ಲಿ ಎಲ್ಲಾ ರೀತಿಯ ಪ್ರೋತ್ಸಾಹ ನೀಡಿದ ಬಿ.ಎಂ.ಇಚ್ಲಂಗೋಡು, ಡಾ. ವಹಾಬ್, ಹಂರಝುಮಲಾರ್, ಬಿ.ಎ.ಮೊಹಮ್ಮದ್ ಹನೀಫ್ ಅಧ್ಯಕ್ಷರು, ಅಖಿಲ ಭಾರತ ಬ್ಯಾರಿ ಪರಿಷತ್, ಎಂ.ಬಿ. ಅಬ್ದುಲ್ ರೆಹಮಾನ್ ಅಧ್ಯಕ್ಷರು, ಕೇಂದ್ರ ಬ್ಯಾರಿ ಸಾಹಿತ್ಯ ಪರಿಷತ್, ಸಾರಾ ಅಬುಬಕರ್ ಲೇಖಕಿ, ಯು.ಜೆ.ಎಂ.ಎ.ಹಕ್, ಉಮ್ಮರ್ ಯು.ಎಚ್, ಕೆ.ಎಂ.ಅಶ್ರಫ್, ಶೆಹನಾಜ್ ಎಂ, ಅಬ್ದುಲ್ ರೆಹಮಾನ್ ಕೋಟೆಗಾರ್ ಹಾಗೂ ನಾಡಿನ ಅನೇಕ ವಿದ್ವಾಂಸರನ್ನು ನಮ್ರತೆಯಿಂದ ಸ್ಮರಿಸುತ್ತೇನೆ.

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ – ಮಂಗಳೂರು 575001

ಪಮೀದ ಬೇಗಂ
ಸಂಶೋಧಕಿ

# ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯ – ಒಂದು ಸಾಂಸ್ಕೃತಿಕ ಅಧ್ಯಯನ

## ಅಧ್ಯಾಯಗಳ ವಿವರ

## ಅಧ್ಯಾಯ ನಾಲ್ಕು: ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ



## ಅಧ್ಯಾಯ ಐದು: ಕೌಟುಂಬಿಕ ಸ್ಥಿತಿಗತಿ



## ಅಧ್ಯಾಯ ಆರು: ಶೋಧನದ ಫಲಿತ

## ಚಿತ್ರಮುಖಿ

# ಅಧ್ಯಾಯ ಒಂದು

# ಅಧ್ಯಯನದ ಪರಿಗ್ರಹಿಕೆ

೧.೧ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವಿಧಾನ

೧.೨ ಆಕರ ಸಾಮಗ್ರಿಗಳು

೧.೩ ಅಧ್ಯಯನದ ವಿನ್ಯಾಸ

೧.೪ ಬ್ಯಾರಿ ಸಮುದಾಯದ ಸಾಂಸ್ಕೃತಿಕ ಅಧ್ಯಯನದ ಅಗತ್ಯ

# ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ



# ಅಧ್ಯಾಯ ಒಂದು
# ಅಧ್ಯಯನದ ಪರಿಗ್ರಹಿಕೆ

## ೧.೧. ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವಿಧಾನ

ಇತಿಹಾಸ ಎನ್ನುವುದು ನಡೆಯುವಂತ ತತ್ವಶಾಸ್ತ್ರ. ಮಾನವನ ಬಹುಮುಖ ಪ್ರತಿಭೆಯನ್ನು ತಿಳಿಯಲು ಇತಿಹಾಸವನ್ನು ವೈಜ್ಞಾನಿಕವಾಗಿ ಸಂಶೋಧಿಸುವುದು ಅತೀ ಅಗತ್ಯ. ತಮ್ಮ ಇತಿಹಾಸ ಪ್ರಜ್ಞೆಯಿಂದಲೇ ಚೀನಿಯರು, ಜಪಾನೀಯರು ಮತ್ತು ಯಹೂದಿಯರು ಇಂದಿಗೂ ಒಗ್ಗಟ್ಟಾಗಿರಲು ಸಾಧ್ಯವಾಗಿದೆ. ವಿಖ್ಯಾತ ಇತಿಹಾಸ ತಜ್ಞ ರಾನ್ಕೆಯ ಅಭಿಪ್ರಾಯದಲ್ಲಿ ಇತಿಹಾಸವನ್ನು ದುರುಪಯೋಗಪಡಿಸಿದವರು ದೇಶದ ಶಾಪಕ್ಕೆ ಒಳಗಾಗುವರು. ಇದು ಭಾರತದಲ್ಲಿ ನಡೆದಿದೆ. ಭಾರತ ದೇಶದಲ್ಲಿ ದೇಶವನ್ನು ಛಿದ್ರ ಮಾಡಲು ಇತಿಹಾಸವನ್ನು ಉಪಯೋಗಿಸಲಾಯಿತು. ಆಂಗ್ಲರು ಭಾರತದ ಇತಿಹಾಸ ಬರೆಯುವಾಗ ಮುಸ್ಲಿಮರನ್ನು ದೇಶದ ವೈರಿಗಳಂತೆ ಚಿತ್ರಿಸಿ, ಹಿಂದೂ ಮುಸ್ಲಿಮರ ನಡುವೆ ದ್ವೇಷವನ್ನು ಬಿತ್ತಿದರು. ಆಂಗ್ಲರು ಮತ್ತವರ ಹಿಂಬಾಲಕ ಇತಿಹಾಸಕಾರರು ಉತ್ತರ ಭಾರತದ ಮತ್ತು ದಕ್ಷಿಣ ಭಾರತದಲ್ಲಿ ಇಸ್ಲಾಮಿನ ಬೆಳವಣಿಗೆಯ ವ್ಯತ್ಯಾಸವನ್ನು ತಿಳಿಯದಾದರು. 'ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯ ಒಂದು ಸಾಂಸ್ಕೃತಿಕ ಅಧ್ಯಯನ' ಮಹಾ ಪ್ರಬಂಧ ಸಂಶೋಧನೆ ಈ ತಪ್ಪನ್ನು ತಿಳಿಹೇಳುವ ಒಂದು ಪ್ರಯತ್ನ. ದಕ್ಷಿಣ ಕನ್ನಡ ಜಿಲ್ಲೆಯ ಪ್ರಗತಿಗೆ ಬ್ಯಾರಿ ಸಮುದಾಯವು ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿದೆ. ಈಗಾಗಲೇ ಬ್ಯಾರಿ ಸಮುದಾಯದ ಬಗ್ಗೆ ಹಲವಾರು ಸಂಶೋಧನಾ ಕೃತಿಗಳು ಪ್ರಕಟಗೊಂಡಿದೆ. ಪ್ರಕಟಿತ, ಅಪ್ರಕಟಿತ, ಆಕಾರಗಳ ಸಹಾಯದಿಂದ ಹಲವಾರು ಲೇಖಕರು ತಮ್ಮ ಲೇಖನಗಳನ್ನು ವಿಶೇಷ ಮಾಹಿತಿಗಳೊಂದಿಗೆ ಮುಂದಿಟ್ಟಿದ್ದಾರೆ. ಬ್ಯಾರಿ ಸಮುದಾಯದ ಬಗ್ಗೆಸಂಶೋಧನೆ ಆಗಿದ್ದರೂ ಕೂಡ ಕೆಲವೊಂದು ವಿಚಾರದಲ್ಲಿ ಸ್ಪಷ್ಟತೆ ಇಲ್ಲದೆ ಅಲ್ಲಲ್ಲಿ ಖಾಲಿ ಅಂತರಗಳನ್ನು ಕಾಣಬಹುದು. ಬ್ಯಾರಿ ಭಾಷೆ, ಲಿಪಿ ಮತ್ತು ಸಾಂಸ್ಕೃತಿಕ

ಅಧ್ಯಯನದ ಬಗ್ಗೆ ಹಲವಾರು ಮಾಹಿತಿಗಳು ಲಭ್ಯವಿದ್ದರೂ, ಬ್ಯಾರಿ ಸಮುದಾಯದ ಸಾಮಾಜಿಕ ಜೀವನ, ಹಿಂದಿನ ಕಾಲದಲ್ಲಿ ಬ್ಯಾರಿಗಳು ಅವಲಂಬಿಸಿದ ವೃತ್ತಿ, ಆಧುನಿಕ ಕಾಲದಲ್ಲಿ ಅವರ ವೃತಿಗಳಲ್ಲಿ ಬದಲಾವಣೆ, ಆರ್ಥಿಕ ಕಾರಣಗಳಿಂದ ಸಾಮಾಜಿಕ ಜೀವನದಲ್ಲಾದ ಏರುಪೇರುಗಳು, ಬ್ಯಾರಿಗಳ ಕೌಟುಂಬಿಕ ವ್ಯವಸ್ಥೆ, ಶಿಕ್ಷಣ ಮತ್ತು ಕುಟುಂಬ ಜೀವನದಲ್ಲಿ ಶಿಕ್ಷಣಕ್ಕೆ ಕೊಡುವ ಪ್ರಾಮುಖ್ಯತೆಗಳು ಇತ್ಯಾದಿ ವಿಚಾರಗಳ ಬಗ್ಗೆ ಈವರೆಗೆ ಯಾವ ಅಧ್ಯಯನವೂ ಆಗಿಲ್ಲ. ಸ್ವತಂತ್ರ ಪೂರ್ಣ ಮಾಹಿತಿ ಲಭ್ಯ ಆಗಬೇಕಾದ ಉದ್ದೇಶ ಇರುವ ಕಾರಣ 'ದಕ್ಷಿಣ ಕನ್ನಡ ಬ್ಯಾರಿ ಸಮುದಾಯ ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ವಿಶೇಷ ಅಧ್ಯಯನವನ್ನು ನಾನು ಕೈಗೆತ್ತಿಕೊಂಡಿದ್ದೇನೆ. ಈ ತನಕ ಬೆಳಕಿಗೆ ಬಾರದೆ ಇರುವ ವಿಚಾರಗಳನ್ನು ಬೆಳಕಿಗೆ ತರುವ ಪ್ರಯತ್ನವೊಂದನ್ನು ಈ ಅಧ್ಯಯನದ ಮೂಲಕ ಕಾರ್ಯಗತಗೊಳಿಸಲು ಪ್ರಯತ್ನಿಸಿದ್ದೇನೆ. ಈಗಾಗಲೇ'ದಿ ಬ್ಯಾರೀಸ್ ವೆಲ್‌ಫೇರ್ ಅಸೋಸಿಯೇಷನ್', 'ಬ್ಯಾರಿ ಟೈಮ್ಸ್', ಎಂಬ ಪ್ರತಿಕೆಯಲ್ಲಿ ಬ್ಯಾರಿ ಸಮುದಾಯಕ್ಕೆ ಸಂಬಂಧ ಪಟ್ಟ ಲೇಖನಗಳನ್ನು ಪ್ರಕಟಿಸಿದೆ. ಆದರೂ ಜಿಲ್ಲೆಯ ಮುಸ್ಲಿಮರಲ್ಲಿ ಶೇಕಡಾ ಎಂಬತ್ತರಷ್ಟು ಮುಸ್ಲಿಮರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿದರೂ ಅವರ ಬಗ್ಗೆ ಆದ ಅಧ್ಯಯನ ತೀರಾ ಕಡಿಮೆ. ಈ ನಿಟ್ಟಿನಲ್ಲಿ ಇ.ತ್ತೀಚಿನ ದಿನಗಳಲ್ಲಿ ಈ ಸಮುದಾಯದ ಆರ್ಥಿಕ ಪರಿಸ್ಥಿತಿಯಿಂದಾಗಿ ಸಾಮಾಜಿಕ ಜೀವನದಲ್ಲಾಗುವ ಬದಲಾವಣೆಯನ್ನು ಕೂಲಂಕುಷವಾಗಿ ಅಧ್ಯಯನ ಮಾಡುವ ಅವಶ್ಯವಿದೆ. ಈ ಅಧ್ಯಯನ ಅನ್ವೇಷಣೆ ಮಾದರಿಯದಲ್ಲ, ಯಾರೂ ಕೇಳರಿಯದ ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಉದ್ದೇಶವೂ ಇಲ್ಲ. ಚದುರಿ ಹೋಗಿರುವ ಮಾಹಿತಿಗಳನ್ನು ಒಪ್ಪವಾಗಿ ಜೋಡಿಸಿ ಒಂದು ಖಚಿತವಾದ 'ಆಕೃತಿ ನಿರ್ಮಾಣ' ಮಾಡುವ ವಿನ್ಯಾಸವಿದ್ದು, ಪ್ರಾಚೀನ ಸಂಸ್ಕೃತಿಯೊಂದು ವರ್ತಮಾನದ ಸಂದರ್ಭದಲ್ಲಿ ಕಾಲದ ಅವಶ್ಯಕತೆಗೆ ತಕ್ಕಂತೆ ತನ್ನನ್ನು ಪುನರ್‌ರೂಪಿಸಿಕೊಳ್ಳುವ ಪ್ರಯತ್ನ ಹಾಗೂ ಅದು ಸಮಾಜದ ಮತ್ತು ಕುಟುಂಬದ ಮೇಲೆ ಬೀರುವ ಪರಿಣಾಮವನ್ನು ಅಂಕಿ ಸಂಖ್ಯೆಗಳ ಹಾಗೂ ಕ್ಷೇತ್ರಕಾರ್ಯದ ಆಧಾರದ ಮೇಲೆ ತಿಳಿದುಕೊಳ್ಳುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

## ೧.೨ ಆಕರ ಸಾಮಾಗ್ರಿಗಳು

ತುಳುನಾಡಿನ ಮುಸ್ಲಿಮರ ಇತಿಹಾಸದ ಬಗ್ಗೆ ಪ್ರಕಟವಾದ ಗ್ರಂಥಗಳು ಕೈಬೆರಳೆಣಿಕೆಗಳಷ್ಟಿವೆ. ಅದರಲ್ಲೂ ೧೯೯೨ ರವರೆಗೆ ಯಾವುದೇ ಗ್ರಂಥಗಳು ಬ್ಯಾರಿ ಸಮುದಾಯದ ಬಗ್ಗೆ ಬೆಳಕು ಚೆಲ್ಲಲಿಲ್ಲ. ಅದರ ನಂತರ ಕೆಲವು ಗ್ರಂಥಗಳು ಪ್ರಕಟಗೊಂಡವು. ಅಧ್ಯಯನ ವಿಧಾನದ ಪರಿಚಯ ಮಾಡುವುದು ಸಂಶೋಧಕರ ಕರ್ತವ್ಯ, ಮೂಲದಾಖಲೆ ಮತ್ತು ಉಪದಾಖಲೆ, ಅಪ್ರಕಟಿತ ದಾಖಲೆಗಳು,ಪರಮಾರ್ಶಿಕ ಗ್ರಂಥಗಳು, ಕ್ಷೇತ್ರ ಪರ್ಯಟನೆ, ವಿದ್ವಾಂಸರೊಡನೆ ಭೇಟಿ, ಸಂಪನ್ಮೂಲ ಹಿರಿಯರೊಡನೆ ಸಂಭಾಷಣೆ ಇವು ನನ್ನ ಸಂಶೋಧನಾ ಅಧ್ಯಯನಕ್ಕೆ ನಡೆಸಿದ ಕಾರ್ಯ ತಂತ್ರಗಳು. ಬಳಸಿದ ಕೆಲವು ಗ್ರಂಥಗಳು, ಮುಸ್ಲಿಂಸ್ ಆಫ್ ದಕ್ಷಿಣ ಕನ್ನಡ, ತುಳುನಾಡ ಮುಸ್ಲಿಮರು, ಬ್ಯಾರಿ ಸಂಸ್ಕೃತಿ, ಪೊಲಿ, ಬ್ಯಾರಿ ಮುಸ್ಲಿಮರು, ಬ್ಯಾರಿ ಭಾಷೆಯ ಉಗಮ ಮತ್ತು ವೈವಿಧ್ಯತೆ, ಬ್ಯಾರಿ ಭಾಷೆ ಮತ್ತು ಜನಪದ ಕಥೆಗಳು ಮುಂತಾದವುಗಳು.

## ೧.೩ ಅಧ್ಯಯನದ ವಿನ್ಯಾಸ

ಈ ಪ್ರಬಂಧದಲ್ಲಿ ಒಟ್ಟು ಆರು ಅಧ್ಯಾಯಗಳಿದ್ದು, ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿಯನ್ನು ಚರ್ಚಿಸಿ ಸಂಶೋಧನಾ ಪ್ರಬಂಧದ ಆಕೃತಿಗೆ ಪೂರಕವಾಗುವಂತೆ ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯದ ಸಂಸ್ಕೃತಿ ವಿಕಾಸ ಹಾಗೂ ಅವು ಈ ನೆಲದ ಮೇಲೆ ಮೂಡಿಸಿದ ಪರಿಣಾಮಗಳನ್ನು ತಿಳಿಸಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿಗಳ ಮೂಲ, 'ಬ್ಯಾರಿ' ಪದದ ಉತ್ಪತ್ತಿ ಹೇಗೆ ಬ್ಯಾರ ಪದದಿಂದ ಬಂತು. ಬ್ಯಾರಿ ಸಮುದಾಯದ ಮೂಲದ ಇತಿಹಾಸ ಯಾವ ರೀತಿ ಬಂತು ಎಂದು ತಿಳಿಸಲಾಗಿದೆ. ಬ್ಯಾರಿಗಳು ಮಾತನಾಡುವ ಭಾಷೆ ಯಾಕೆ ವಿಭಿನ್ನವಾಗಿದೆ. ಈ ಬ್ಯಾರಿ ಭಾಷೆ ತುಳುಭಾಷೆಗೆ ಹೇಗೆ ಹತ್ತಿರವಾಗಿದೆ. ಬ್ಯಾರಿ ಭಾಷೆ ಮತ್ತು ಮಳಯಾಳಂ ಭಾಷೆಯ ಉಚ್ಚಾರಣೆಯ ವ್ಯತ್ಯಾಸಗಳು, ತುಳುಭಾಷೆ ಮತ್ತು ಬ್ಯಾರಿ ಭಾಷೆಯ ಉಚ್ಚಾರಣೆಯಲ್ಲಿ ಇರುವ ಸಾಮ್ಯತೆ, ಪದಗಳ ಬಳಕೆ ಮತ್ತು ಅದರ ಕನ್ನಡದ ಅರ್ಥ.

ಎರಡನೇ ಅಧ್ಯಾಯದಲ್ಲಿ ಬ್ಯಾರಿ ಭಾಷೆಯಲ್ಲಿ ಕಾಣುವ ವೈವಿಧ್ಯತೆ ಅಂದರೆ ಪ್ರದೇಶದಿಂದ ಪ್ರದೇಶಕ್ಕೆ ಹೋದಾಗ, ಬ್ಯಾರಿ ಭಾಷೆಯ ಉಚ್ಚಾರಣೆ ಯಲ್ಲಿ ಕಾಣುವ ವ್ಯತ್ಯಾಸ, ಬ್ಯಾರಿ ಭಾಷೆಯು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತಾ ಹೋದರೂ ಬ್ಯಾರಿ ಸಂಸ್ಕೃತಿಯ ಸೊಗಡು ಬ್ಯಾರಿಗಳಿಂದ ದೂರವಾಗಿಲ್ಲ. ಬ್ಯಾರಿ ಭಾಷೆಗೆ ಮೂಲ ಹಳೆಗನ್ನಡ ಆದ್ದರಿಂದ ಹಳೆಗನ್ನಡದ ಹಲವಾರು ಪದಗಳು ಬ್ಯಾರಿ ಭಾಷೆಯಲ್ಲಿದೆ. ಉದಾ:- ಮದಲ್, ಸಪುರ, ಪುಲಿ, ತೋರ ಇತ್ಯಾದಿ ಹಳೆಗನ್ನಡದಲ್ಲಿ ಕಾಣಸಿಗುತ್ತದೆ. ಬ್ಯಾರಿ ಭಾಷೆಗೆ ಲಿಪಿ ಇದೆ ಎಂಬ ವಾದ ಬಿ.ಎಂ. ಇಚ್ಲಂಗೋಡುರವರದು. ಲಿಪಿ ಇಲ್ಲ ಎಂಬ ವಿವಾದಗಳು. ಅದು ಬ್ಯಾರಿ ಲಿಪಿಯಾಗದೆ ಅರಬಿ ಲಿಪಿಯಾಗಿದೆ.

ಬ್ಯಾರಿಗಳು ದಕ್ಷಿಣಕನ್ನಡದಲ್ಲಿ ಹಲವಾರು ಹಬ್ಬಗಳನ್ನು ಆಚರಿಸುತ್ತಾರೆ. ಹಬ್ಬಗಳ ಆಚರಣೆಯಿಂದ ಆಗುವ ಪ್ರಯೋಜನಗಳು. ಕೋಮುಸೌಹಾರ್ದತೆಗೆ ಹಬ್ಬಗಳು ಮೂಲ ಕಾರಣ. ಆದರೆ ಇತ್ತೀಚಿನ ದಿನಗಳಲ್ಲಿ ಹಬ್ಬಗಳ ಆಚರಣೆಯ ಉದಾಸೀನತೆ. ಮದುವೆ ಸಮಾರಂಭದಲ್ಲಿ ಹಿಂದಿನ ಕಾಲಕ್ಕೂ ಮತ್ತು ಇತ್ತೀಚಿನ ದಿನಗಳಲ್ಲಿ ಉಂಟಾದ ವ್ಯತ್ಯಾಸ. ಉರೂಸ್ ಆಚರಣೆ ಎಂದರೇನು? ಇದರ ಪ್ರಾಮುಖ್ಯತೆ, ಮತ್ತು ಆಧುನಿಕ ಕಾಲದಲ್ಲಿ ಈ ಆಚರಣೆ ಬಗ್ಗೆಇರುವ ಅಸಡ್ಡೆ. ಬ್ಯಾರಿ ಸಮುದಾಯದವರೂ ಮೂಢನಂಬಿಕೆಗಳಲ್ಲಿ ವಿಶ್ವಾಸವನ್ನು ಹೇಗೆ ತೋರಿಸುತ್ತಾರೆ ಆದರೆ ಇಸ್ಲಾಂ ಧರ್ಮದಲ್ಲಿ ಮೂಢನಂಬಿಕೆಗಳಿಗೆ ಸ್ಥಾನವಿಲ್ಲ. ಈ ಎಲ್ಲಾ ವಿಚಾರಗಳಿಗೆ ಜನರ ಪ್ರತಿಕ್ರಿಯೆ ಹೇಗೆ? ಎಂಬಿತ್ಯಾದಿ ವಿಚಾರಗಳನ್ನು ಕೂಲಂಕುಷವಾಗಿ ಮೂರನೆಯ ~~ಅಧ್ಯಾಯದಲ್ಲಿ~~ ಚರ್ಚಿಸಲಾಗಿದೆ.

ಬ್ಯಾರಿ ಸಮುದಾಯದವರ ಸಾಮಾಜಿಕ ಜೀವನದಲ್ಲಾದ ವ್ಯತ್ಯಾಸವನ್ನು ನಾಲ್ಕನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಹಿಂದಿನ ಕಾಲದಲ್ಲಿ ಅವರು ಯಾವ ರೀತಿ ಸಮಾಜದಲ್ಲಿ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದಾರೆ. ಅವರ ವೃತ್ತಿಗಳು. ಬ್ಯಾರಿ ಎಂಬ ಪದ ವ್ಯಾಪಾರಸ್ಥರಾದ ಕಾರಣ ಕರೆಯಲಾಗಿದೆ ಎಂಬ ಹೇಳಿಕೆಯಿದೆ ಆದರೆ ಇದು ಸಮಂಜಸವಲ್ಲ ಏಕೆಂದರೆ ಕೊಂಕಣಿಗಳು ಮತ್ತು ಶೆಟ್ಟಿಗಳೂ ವ್ಯಾಪಾರಸ್ಥರು ಅವರನ್ನು ಯಾಕೆ ಬ್ಯಾರಿಗಳು ಎಂದು ಕರೆಯಲಿಲ್ಲ. ಇತ್ತೀಚಿನ ದಿನಗಳಲ್ಲಿ ಬ್ಯಾರಿಗಳು ಬರೇ ವ್ಯಾಪಾರಸ್ಥರಾಗಿರದೆ ಇತರ

ವೃತ್ತಿಗಳಲ್ಲೂ ಮುಂದುವರಿದಿದ್ದಾರೆ. ಅವರ ಸಾಮಾಜಿಕ ಜೀವನದಲ್ಲಾದ ಏರುಪೇರು, ಈ ಸಾಮಾಜಿಕ ಬದಲಾವಣೆಗೆ ಆರ್ಥಿಕ ವಿಚಾರಗಳೇ ಮೂಲ ಕಾರಣ. ಗಲ್ಫ್ ರಾಷ್ಟದಲ್ಲಿ ದೊರೆಯುವ ಉದ್ಯೋಗ ಮತ್ತು ಹೆಚ್ಚು ಸಂಬಳದ ಆಕರ್ಷಣೆಯಿಂದ ಬ್ಯಾರಿ ಯುವಕರು ತಮ್ಮ ರಾಷ್ಟ ತೊರೆದು ಇತರ ದೇಶದಲ್ಲಿ ಉದ್ಯೋಗಿಗಳಾದ ಕಾರಣ. ಅವರ ಕುಟುಂಬದಲ್ಲಾಗುವ ಬದಲಾವಣೆಗಳೇನು? ಆರ್ಥಿಕವಾಗಿ ಸಮುದಾಯ ಮುಂದುವರಿದರೂ, ಇತರ ಹಾನಿಗಳೇನು? ಎಂಬ ವಿಚಾರಗಳ ಅಧ್ಯಯನ ಮಾಡಿ ಬರೆಯಲಾಗಿದೆ. ಹಿಂದೆ ಕುಟುಂಬ ವ್ಯವಸ್ಥೆ ಯಾವ ರೀತಿ ಇತ್ತು ಈಗ ಕುಟುಂಬ ವ್ಯವಸ್ಥೆ ಹೇಗೆ ಮಾರ್ಪಾಟುಗೊಂಡಿದೆ? ಕುಟುಂಬ ವ್ಯವಸ್ಥೆಯಲ್ಲಿ ಶಿಕ್ಷಣದ ಪ್ರಾತವೇನು? ಶಿಕ್ಷಣ ವ್ಯವಸ್ಥೆಯಿಂದಲೇ ಕೌಟುಂಬಿಕ ವ್ಯವಸ್ಥೆಯಲ್ಲಿ ವ್ಯತ್ಯಾಸವಾಗಿದೆ.

ಐದನೆಯ ಅಧ್ಯಾಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯದಲ್ಲಿ ಸಾಮಾಜಿಕ ಜೀವನದ ಇತ್ತೀಚಿಗಿನ ಬದಲಾವಣೆ ಮತ್ತು ಕೌಟುಂಬಿಕ ಸ್ಥಿತಿಗತಿಗಳಲ್ಲಾದ ಏರುಪೇರುಗಳ ಬಗ್ಗೆ ಅಧ್ಯಯನ ಮಾಡಿ, ಅದನ್ನು ಬೆಳಕಿಗೆ ತರುವುದು ನನ್ನ ಉದ್ದೇಶವಾಗಿದೆ. ಮೊದಲಿನ ಕಾಲದಲ್ಲಿ ಬ್ಯಾರಿ ಕುಟುಂಬ ವ್ಯವಸ್ಥೆ ಪಿತೃಮೂಲದಿಂದ ಕೂಡಿತ್ತು. ಅಂದರೆ ತಂದೆಯೇ ಮನೆಯ ಯಜಮಾನನಾಗಿದ್ದ. ಈಗ ಬ್ಯಾರಿ ಕುಟುಂಬದಲ್ಲಿ ಪ್ರತಿಯೊಬ್ಬ ಸದಸ್ಯ ಉದ್ಯೋಗ ನಿಮಿತ್ತ ಗಲ್ಫ್ ರಾಷ್ಟಕ್ಕೆ ಹೋಗುವ ಕಾರಣ ಪಿತೃಮೂಲ ಕುಟುಂಬ, ಮಾತೃಮೂಲ ಕುಟುಂಬವಾಗಿ ಪರಿವರ್ತನೆಗೊಂಡಿದೆ. ಮೊದಲು ಬ್ಯಾರಿ ಸಮುದಾಯದವರ ಕುಟುಂಬದಲ್ಲಿ ಹುಡುಗಿಯರ ವಿದ್ಯಾಭ್ಯಾಸ ಕಡೆಗಣಿಸಲಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಬ್ಯಾರಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡಲಾಗಿದೆ. ಬ್ಯಾರಿ ಯುವಕರು ತಮ್ಮ ವಿದ್ಯಾಭ್ಯಾಸ ಮೊಟುಕುಗೊಳಿಸಿ ಗಲ್ಫ್ ರಾಷ್ಟಕ್ಕೆ ಆಕರ್ಷಕರಾಗುತ್ತಿದ್ದಾರೆ. ಆದುದರಿಂದ ಆರ್ಥಿಕ ಸುಧಾರಣೆಯು ಬ್ಯಾರಿ ಸಾಮಾಜಿಕ ಜೀವನದಲ್ಲಿ ಬದಲಾವಣೆಯನ್ನು ತಂದಿದೆ. ಆದರೆ ಇಂದಿಗೂ ಹಲವಾರು ಕುಟುಂಬಗಳು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿದೆ. ಪಟ್ಟಣದಲ್ಲಿ ಮಾತ್ರ ಬ್ಯಾರಿ ಸಮುದಾಯ ಮುಂದುವರಿಯುತ್ತಿದೆ. ಹಳ್ಳಿಗಳಲ್ಲಿ ಬ್ಯಾರಿ ಕೌಟುಂಬಿಕ ವ್ಯವಸ್ಥೆ ಹೆಚ್ಚಿನ ಮಟ್ಟಿಗೆ ಬದಲಾಗಲಿಲ್ಲ. ಇದರ ಬಗ್ಗೆ ಯಾರೂ ಹೆಚ್ಚಿನ ಗಮನ ಕೊಡುತ್ತಾ ಇಲ್ಲ.

ಬ್ಯಾರಿ ಸಮುದಾಯವು ತುಳುನಾಡಿನಲ್ಲಿ ಇತರ ಸಮುದಾಯದ ಹಾಗೆ ತನ್ನದೇ ಆದ ಕೊಡುಗೆ ನೀಡಿದೆ. ಅವರ ಸಾಂಸ್ಕೃತಿಕ ಕೊಡುಗೆಯನ್ನು ಬರೆಯುವುದು ಪ್ರಾಮುಖ್ಯವಾಗಿದೆ.

## ೧.೪ ಬ್ಯಾರಿ ಸಮುದಾಯದ ಸಾಂಸ್ಕೃತಿಕ ಅಧ್ಯಯನದ ಅಗತ್ಯ

ಸಾವಿರದ ಮುನ್ನೂರು ವರ್ಷಗಳಿಂದ ಈ ಪ್ರದೇಶದಲ್ಲಿ ಬೆಳೆದ ಬ್ಯಾರಿ ಸಮಾಜ ತುಳುನಾಡಿನ ಅವಿಭಾಜ್ಯ ಅಂಗ. ಅದನ್ನು ನಿರಾಕರಿಸಲು ಯಾರಿಗೂ ಹಕ್ಕಿಲ್ಲ. ತುಳುನಾಡಿನ ವೈಭವವು ನಿಜವಾಗಿಯೂ ಇರುವುದು ಅದರ ಸಮನ್ವಯ ಸಹಬಾಳ್ವೆಯಲ್ಲಿ. ಇಲ್ಲಿ ಬ್ಯಾರಿ ಸಮುದಾಯ ಹೇಗೆ ಹಾಸು ಹೊಕ್ಕಾಗಿ ಬೆಳೆದು ಇಲ್ಲಿನ ಸಂಸ್ಕೃತಿಯನ್ನು ಬೆಳೆಸಿದರು ಎಂಬುದು ನನ್ನ ಅಧ್ಯಯನದ ಪ್ರತಿಪಾದನೆ. ಧರ್ಮ, ಭಾಷೆ ಅಥವಾ ಜೀವನ ಕ್ರಮಗಳು ಬೇರೆಯಾದಾಗ ಅವು ಹೊಸ ಶ್ರೀಮಂತಿಕೆಗೆ ಅನುವು ಮಾಡಬಹುದು ಎಂಬ ಭಾವ. ಸಂಸ್ಕೃತಿ ಎನ್ನುವುದು ನಿರಂತರ ಹರಿಯುವ ಪ್ರವಾಹ ಎನ್ನುವ ಮಾತಿದೆ. ಬ್ಯಾರಿ ಸಂಸ್ಕೃತಿಯದ್ದು ಈಗ ಏರುಮುಖದ ಹರಿವು. ಹಳೆಯ ಬೇರುಗಳನ್ನು ತಡಕಾಡುತ್ತಾ ಹೊಸ ಚಿಗುರುಗಳ ಅನ್ವೇಷಣೆ ನಡೆಸುವ ಕಾಲವಿದು. ಹರಿಯುತ್ತಿರುವ ಕಾಲ ಪ್ರವಾಹದಲ್ಲಿ ಕಳೆದು ಹೋದ ವೈಭವವನ್ನು ನೆನಪಿಸಿಕೊಳ್ಳುತ್ತಾ ವರ್ತಮಾನದ ಸಂಕಷ್ಟಗಳ ಪರಿಹಾರಕ್ಕೆ ದಾರಿ ಹುಡುಕುವ ಪ್ರಕ್ರಿಯೆ ಆರಂಭವಾಗಿದೆ. ಸಮಾಜದಲ್ಲಿ ಯಾರೂ ಅನಗತ್ಯರಲ್ಲ ಎಂಬ ಭಾವನೆ ಬಂದಾಗ ಮಾತ್ರ ಸಮಾಜ ಸುದೃಢವಾಗುತ್ತದೆ ಎಂಬುದು ಶತಸತ್ಯ. ಇದನ್ನು ಕಂಡುಕೊಳ್ಳುವುದು ಬಹುಮುಖ್ಯ ಬ್ಯಾರಿ ಮಕ್ಕಳ ನಾಳೆಯ ಬದುಕು, ನಿನ್ನೆಯ ನೆನಪಿನಿಂದ ಮಂಕಾಗಬಾರದು. ನಮ್ಮ ಭಾಷೆ, ನಮ್ಮ ಇತಿಹಾಸ, ನಮ್ಮ ಸಂಸ್ಕೃತಿ, ನಮ್ಮ ಪರಂಪರೆ ಯಾವುದೂ ಬ್ಯಾರಿ ಸ್ಮೃತಿ ಪಟಲದಿಂದ ಮರೆಯಾಗಬಾರದು ಎಂಬ ಸಮುದಾಯದ ಅದಮ್ಯ ಹಂಬಲವೇ ನನ್ನ ಈ ಅಧ್ಯಯನ.

ಬ್ಯಾರಿಗಳು ಬಹುತೇಕವಾಗಿ ವ್ಯಾಪಾರವನ್ನೇ ಮಾಡಿದವರು. ವಿದ್ಯೆ, ಸಮಾಜದ ಬೆಳವಣಿಗೆಗಳಿಗೆ ಮುಕ್ತವಾಗಿ ತೆರೆದುಕೊಳ್ಳಲು ಹಿಂಜರಿದವರು ಎಂಬ ಆಪಾದನೆಗಳು ಸಂಪೂರ್ಣವಾಗಿ ಸತ್ಯವಲ್ಲ. ಈ ತುಳುನಾಡಿಗೆ ತಮ್ಮದೇ ಆದ ಆಚಾರ, ವಿಚಾರಗಳಿಂದ ಕೊಡುಗೆಯನ್ನು ಕೊಟ್ಟವರೇ ಬ್ಯಾರಿಗಳು. ಸಂಸ್ಕೃತಿ ಎನ್ನುವುದು ಎಷ್ಟೇ ವರ್ಷಗಳು ಸಂದರೂ

ಅದು ನಶಿಸಿಹೋಗುವುದಿಲ್ಲ. ಆದರೆ ಸಂಸ್ಕೃತಿಯಲ್ಲಿ ಕಾಲ ಬದಲಾದಂತೆ ಕೆಲವು ಬದಲಾವಣೆಗಳನ್ನು ಕಾಣಬಹುದೇ ವಿನಃ ನಶಿಸಿಹೋಗದು. ಹಾಗೆಯೇ ಬ್ಯಾರಿ ಸಮುದಾಯ ಸಮಾಜದಲ್ಲಿ ತಮ್ಮ ಭಾಷೆ, ಆಚರಣೆಗಳು, ಸಂಭ್ರಮ, ಮೂಢನಂಬಿಕೆ, ಆರ್ಥಿಕ ಕಾರಣ ಇವೆಲ್ಲವುಗಳಿಂದ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ತುಳುನಾಡಿನಲ್ಲಿ ತುಳುವರು ತಮ್ಮ ಸಂಸ್ಕೃತಿಯನ್ನು ಯಾವ ರೀತಿ ವೈಭವೀಕರಿಸಿದ್ದಾರೋ, ಅದೇ ರೀತಿ ಬ್ಯಾರಿ ಸಮುದಾಯವು ತಮ್ಮ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿ ತುಳುನಾಡನ್ನು ವೈಭವೀಕರಿಸಿದ್ದಾರೆ.

ನನ್ನ ಈ ಸಂಶೋಧನಾ ಅದ್ಯಯನದಲ್ಲಿ ಬ್ಯಾರಿ ಸಮುದಾಯದ ಸಾಂಸ್ಕೃತಿಕ ಅಧ್ಯಯನದ ಅಗತ್ಯದ ಬಗ್ಗೆ ನಿರೂಪಿಸಲಾಗಿದೆ. ಸಂಸ್ಕೃತಿಯ ಬಗ್ಗೆ ಕೆಲವು ಅಧ್ಯಯನ ಆಗಿದ್ದರೂ. ಇನ್ನೂ ಹಲವಾರು ಬದಲಾವಣೆಗಳ ಬಗ್ಗೆ ಯಾವುದೇ ಮಾಹಿತಿ ಸಿಗುವುದಿಲ್ಲ. ಸಿಗದೇ ಇರುವ ಮಾಹಿತಿಗಳನ್ನು ಸಂಗ್ರಹಿಸಿ ಅದರ ಸಮಗ್ರ ಮಂಥನ ಈ ಅಧ್ಯಯನದ ಉದ್ದೇಶ.

# ಅಧ್ಯಾಯ ಎರಡು

# ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿಗಳ ಮೂಲ ಮತ್ತು ಭಾಷೆ

೨.೧ ಶಬ್ದದ ಉತ್ಪತ್ತಿ

೨.೨ ಬ್ಯಾರಿಗಳ ಮೂಲ

೨.೩ ಬ್ಯಾರಿ ಭಾಷೆ

# ಅಧ್ಯಾಯ ಎರಡು

# ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿಗಳ ಮೂಲ ಮತ್ತು ಭಾಷೆ

## ೨.೧. ಶಬ್ದದ ಉತ್ಪತ್ತಿ

ತುಳುನಾಡು ಹಲವು ಭಾಷೆ, ಜನಾಂಗ, ಕಲೆ ಸಂಸ್ಕೃತಿಗೆ ಜನ್ಮವಿತ್ತ ನಾಡು. ಈ ನಾಡಿನ ಮಣ್ಣಲ್ಲಿ ಜನ್ಮ ತಾಳಿದ ಪ್ರತಿಯೊಂದು ಜನಾಂಗವೂ ತಮ್ಮದೇ ಆದ ವಿಶಿಷ್ಟತೆಯನ್ನು ಪಡೆದಿದೆ. ಇಂಥ ವಿಶಿಷ್ಟತೆ ಪಡೆದ ತುಳುನಾಡಲ್ಲಿ ಜನ್ಮತಾಳಿದ ಜನಾಂಗದಲ್ಲಿ 'ಬ್ಯಾರಿ' ಜನಾಂಗವೂ ಒಂದು. ಬ್ಯಾರಿಗಳು ಇಸ್ಲಾಂ ಧರ್ಮದ ಕಟ್ಟಾ ಅನುಯಾಯಿಗಳಾಗಿದ್ದರೂ ತುಳುನಾಡಿನ ಮಣ್ಣಿನ ಸುಗಂಧ ಇವರ ಆಚರಣೆಗಳಲ್ಲಿ ಹಾಸುಹೊಕ್ಕಾಗಿದೆ.

'ಬ್ಯಾರಿ' ಎನ್ನುವ ಶಬ್ದವೇ ತುಳು ಮೂಲದ್ದು. ಸಂಶೋಧಕರಾದ ಪ್ರೊ.ಬಿ.ಎಂ. ಇಚ್ಲಂಗೋಡು ಮತ್ತು ಡಾ.ವಹಾಬ್ ದೊಡ್ಡಮನೆ ಅವರು ಕೂಡಾ 'ಬ್ಯಾರಿ' ಎಂಬ ಶಬ್ದ ತುಳುನಾಡಿನ 'ಬ್ಯಾರ'ದಿಂದ ಬಂದಿದೆ ಎಂದು ಅಭಿಪ್ರಾಯಪಡುತ್ತಾರೆ[೧]. ಅದೇ ರೀತಿ 'ಮೈಕಾಲ' ಕೃತಿಯನ್ನು ಬರೆದ ಅಹ್ಮದ್ ನೂರಿ ಅವರೂ ಕೂಡಾ ಇದೇ ಅಭಿಪ್ರಾಯ ತಾಳುತ್ತಾರೆ[೨]. ಕೇರಳದ ಮಲಬಾರ್ ಪ್ರಾಂತ್ಯದಲ್ಲಿ ವಾಸವಾಗಿರುವ ಮುಸ್ಲಿಮರನ್ನು ಮಾಪ್ಲಗಳೆಂದು ಕರೆಯುತ್ತಾರೆ. ಈ ಮಾಪ್ಲಾಗಳೇ ವ್ಯಾಪಾರ ನಿಮಿತ್ತ ತುಳುನಾಡಿಗೆ ಬಂದು ಇಲ್ಲಿ ತಳವೂರಿ ಇಲ್ಲಿನ ಸ್ತ್ರೀಯರನ್ನು ಮದುವೆಯಾಗಿ ಬ್ಯಾರಿಗಳೆಂದು ಗುರುತಿಸಿಕೊಂಡರು ಎಂಬ ವ್ಯಾಖ್ಯಾನಕ್ಕೆ ಫಕೀರ್ ಮಹಮ್ಮದ್ ಕಟ್ಪಾಡಿ ಅಭಿಮತ ವ್ಯಕ್ತಪಡಿಸುತ್ತಾರೆ[೩]. ಒಟ್ಟಾರೆ ಬ್ಯಾರಿ ಎಂಬ ಪದವು ತುಳು ಭಾಷೆಯದ್ದಾಗಿದ್ದು, ವ್ಯಾಪಾರಕ್ಕೆ ತುಳುವಿನಲ್ಲಿ ಬ್ಯಾರ ಮತ್ತು ವ್ಯಾಪಾರಸ್ಥನಿಗೆ ಬ್ಯಾರಿ ಎನ್ನಲಾಗುತ್ತಿದ್ದು, ವ್ಯಾಪಾರದಲ್ಲಿ ತೊಡಗಿಸಿಕೊಂಡ ಮುಸಲ್ಮಾನರಿಗೆ ತುಳುವರು ಕೊಟ್ಟ ಬಿರುದು 'ಬ್ಯಾರಿ' ಎಂಬುದಾಗಿದೆ. ಹಾಗಾಗಿಯೇ ಶತಮಾನದ ಹಿಂದಿನ

ಮುಸಲ್ಮಾನರ ಹೆಸರಿನ ಮುಂದೆ ಬ್ಯಾರಿ ಮತ್ತು ಬ್ಯಾರ್ದಿ ಎಂಬ ಪದ ಬಳಕೆಯಾಗಿರುವುದು ಮತ್ತು ಸರ್ಕಾರಿ ದಾಖಲೆ ಪತ್ರಗಳಲ್ಲೂ ಕೂಡಾ ಹೆಸರಿನ ಮುಂದೆ ಬ್ಯಾರಿ ಎಂದು ಸೇರಿಸಲ್ಪಟ್ಟಿರುವುದು ಕಂಡು ಬರುತ್ತದೆ.

ಬಹರಿ ಅಥವಾ ಬೆಹಾರಿ (ಸಮುದ್ರಯಾನಿ) ಎಂಬ ಪದದಿಂದ 'ಬ್ಯಾರಿ' ಎಂಬ ಶಬ್ದ ಬಳಕೆಗೆ ಬಂತೆಂಬ ಅಭಿಪ್ರಾಯವಿದೆ[೪]. ಆದರೆ ದೇಶದ ಕನ್ಯಾಕುಮಾರಿಯಿಂದ ಉತ್ತರದ ಗುಜರಾತಿನವರೆಗೂ ಸಮುದ್ರ ಕಿನಾರೆಯಲ್ಲಿ ಮುಸ್ಲಿಮರು ನೆಲೆಸುತ್ತಿದ್ದು ಅವರು ಮೂಲತ: ಸಮುದ್ರಯಾನಿಗಳೆಂದು ಅಂದರೆ ಅರಬರೆಂದು ಒಪ್ಪಿಕೊಂಡ ಮೇಲೆ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಸೀಮಿತ ಕರಾವಳಿ ಪ್ರದೇಶದ ಮುಸ್ಲಿಮರಿಗೆ 'ಬ್ಯಾರಿ' ಎಂಬ ಹೆಸರು ಹೇಗೆ ಮತ್ತು ಯಾಕೆ ಬಂತು ಎಂಬ ಪ್ರಶ್ನೆ ಉದ್ಭವಿಸುವುದು ಸಹಜ.

ಕೇರಳದ ಮಲಪ್ಪುರಂ ಜಿಲ್ಲೆಯಿಂದ ಉತ್ತರಕ್ಕೆ 'ಮಲಬಾರ್' ಎಂಬ ಹೆಸರಿದೆ. ಮಲಪ್ಪುರಂ, ಕಣ್ಣೂರು, ಕಾಸರಗೋಡು ಜಿಲ್ಲೆಗಳನ್ನು ಒಳಗೊಂಡ ಈ ಪ್ರದೇಶವನ್ನು ಜಿಲ್ಲಾವಾರು ವಿಂಗಡನೆಗೆ ಮುನ್ನ ಮಲಬಾರಿ ಪ್ರದೇಶ ಎಂದೇ ಗುರುತಿಸಲಾಗಿತ್ತು. ಅರಬರೂ ಕೂಡಾ ಈ ಪ್ರದೇಶವನ್ನು ಮಲಬಾರಿ ಎಂದೇ ಕರೆಯುತ್ತಿದ್ದರು. ಆದ್ದರಿಂದ ಈ ಪ್ರದೇಶಕ್ಕೆ ಹತ್ತಿರವಾಗಿರುವ ದಕ್ಷಿಣ ಕನ್ನಡ ಜಿಲ್ಲೆಗೆ ಮಲಬಾರಿನ ಮುಸಲ್ಮಾನರು ವಲಸೆ ಬಂದು ನೆಲೆಸಿರುವ ಸಾಧ್ಯತೆ ಇದೆ. ಹಾಗೆ ಬಂದ ಮಲಬಾರಿ ಮುಸಲ್ಮಾನರನ್ನು 'ಬ್ಯಾರಿಗಳು' ಎಂದು ತುಳುವರು ಸಂಭೋಧಿಸಿರಬಹುದೆಂದು ಲೇಖಕ ಸಾಲೆತ್ತೂರು ಅಬೂಬಕರ್ ಫೈಝಿ ಅವರು ಅಭಿಪ್ರಾಯ ಪಡುತ್ತಾರೆ[೫].

ವ್ಯಾಪಾರ ನಿಮಿತ್ತ ತುಳುನಾಡಿಗೆ ಕಾಲಿಟ್ಟ ಅರಬರು ಇಲ್ಲಿಯ ಹಿಂದೂ ಸ್ತ್ರೀಯರನ್ನು ಮದುವೆಯಾಗಿದ್ದರು ಎಂಬುದಕ್ಕೆ 'ತುಳು ಮಾಪಿಳ್ಳೆಗಳು ಅರಬ್ಬೀ ತಂದೆಗೆ ಮತ್ತು ತುಳು ತಾಯಿಗೆ ಹುಟ್ಟಿದ ಮಕ್ಕಳು' ಎಂಬ ಇತಿಹಾಸಜ್ಞ ಬಿ.ಎ. ಸಾತೆತ್ತೂರು ಅವರ ಅಭಿಪ್ರಾಯವು ಹೆಚ್ಚು ಪುಷ್ಟಿ ನೀಡುತ್ತದೆ. ತುಳು ಸ್ತ್ರೀಗೆ ಹುಟ್ಟಿದ ಮಕ್ಕಳು (ಬ್ಯಾರಿಗಳು) ತನ್ನ ತಂದೆಯ (ಅರಬ್ಬೀ) ಸಂಪರ್ಕವಿರುವವರೆಗೂ ಇಸ್ಲಾಮೀ ಸಂಸ್ಕೃತಿಗೆ ಮಾರು ಹೋಗುತ್ತಿದ್ದರು. ಕೇವಲ

ವ್ಯಾಪಾರಕ್ಕೆ ಆಗಮಿಸುತ್ತಿದ್ದ ಅರಬ್ಬೀಗಳು ತಮ್ಮ ವ್ಯಾಪಾರ ವಹಿವಾಟು ಮುಗಿಸಿದ ಕೂಡಲೇ ಹೆಂಡತಿ ಮಕ್ಕಳನ್ನು ಇಲ್ಲೇ ಬಿಟ್ಟು ತಾಯ್ನಾಡಿಗೆ ತೆರಳುತ್ತಿದ್ದರು. ಹಾಗೆ ಹೋಗುವಾಗ ತಮ್ಮ ಮಕ್ಕಳಿಗೆ ವ್ಯಾಪಾರದ ಬಗ್ಗೆ ಹೆಚ್ಚಿನ ತಿಳುವಳಿಕೆ ಮೂಡಿಸುತ್ತಿದ್ದರು, ಎಂಬುದಕ್ಕೆ ಬ್ಯಾರಿಗಳ ಚಾಕ ಚಕ್ಯತೆಯೇ ಸಾಕ್ಷಿಯಾಗಿದೆ. ಮುಂದೆ ತನ್ನ ತಾಯಿಯ ಆರೈಕೆಯಲ್ಲಿ ಬೆಳೆದ ಮಕ್ಕಳು ವ್ಯಾಪಾರ ಮತ್ತು ಇಸ್ಲಾಮೀ ಸಂಸ್ಕೃತಿಗೆ ಮಾರು ಹೋದರೂ ಕೂಡಾ ತುಳು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದರು ಎಂಬುದಕ್ಕೆ ಬ್ಯಾರಿ ಸಂಸ್ಕೃತಿಯನ್ನು ಅವಲೋಕಿಸಿದಾಗ ತಿಳಿದು ಬರುತ್ತದೆ[೬].

ಬ್ಯಾರಿ ಎಂಬ ಪದ ಧರ್ಮಾಧಾರಿತವಾದುದೋ ಅಥವಾ ಭಾಷಾಧಾರಿತವಾದುದೋ, ಎಂಬುದೂ ಕೂಡಾ ಇದೀಗ ಚರ್ಚಾ ವಿಷಯವಾಗಿದೆ. ಧರ್ಮಾಧಾರಿತವಾದರೆ, ಜಿಲ್ಲೆಯ ದಖ್ನಿನಿಗಳನ್ನು ಯಾಕೆ ಬ್ಯಾರಿ ಎಂದು ಗುರುತಿಸಲಾಗುತ್ತಿಲ್ಲ ಮತ್ತು ಭಾಷಾಧಾರಿತವಾದರೆ ಬ್ಯಾರಿ ಭಾಷೆಯನ್ನು ಮಾತನಾಡುವವರನ್ನೆಲ್ಲಾ ಬ್ಯಾರಿ ಕಕ್ಷೆಯೊಳಗೆ ಸೇರಿಸಬಹುದೇ ಎಂಬ ಪ್ರಶ್ನೆ ಎದುರಾಗುತ್ತಿದೆ. ಒಟ್ಟಾರೆ ಬ್ಯಾರಿ ಎಂಬುದು ಯಾರನ್ನು ಯಾವ ಆಧಾರದ ಮೇಲೆ ಗುರುತಿಸಿಕೊಳ್ಳಬೇಕು ಎಂಬುದು ಇನ್ನೂ ನಿಗೂಢವಾಗಿದೆ. ಬ್ಯಾರಿ ಪದ ಧರ್ಮಾಧಾರಿತವಲ್ಲ, ಕಸಬು ಆಧಾರಿತವಾಗಿದೆ. ಹಾಗಾಗಿ ಬ್ಯಾರಿಗಳೆಲ್ಲಾ ಮುಸ್ಲಿಮರಾಗಿರಬೇಕೆಂಬುದಾಗಲೀ ಕರಾವಳಿಯ ಮುಸ್ಲಿಮರೆಲ್ಲಾ ಬ್ಯಾರಿಗಳಾಗಿರಬೇಕೆಂದು ಇಲ್ಲ. ತುಳುನಾಡಿನ ಶೇಕಡ ೯೫ ರಷ್ಟು ಮಂದಿ ಮುಸ್ಲಿಮರು ವ್ಯಾಪಾರವನ್ನೇ ಕಸಬನ್ನಾಗಿಸಿಕೊಂಡ ಕಾರಣ 'ಬ್ಯಾರಿ' ಪದ ಮುಸ್ಲಿಮರಿಗಾಯಿತು ಎಂದು ಸಂಶೋಧಕ ಪ್ರೊ.ಬಿ.ಎಂ.ಇಚ್ಲಂಗೋಡು ಅವರು ಅಭಿಪ್ರಾಯಪಡುತ್ತಾರೆ[೭].

ಹಿಂದೆ ಮುಸಲ್ಮಾನರು ತಮ್ಮ ಹೆಸರಿನೊಂದಿಗೆ ಬ್ಯಾರಿ ಎಂದು ಸೇರಿಸಿಕೊಳ್ಳುತ್ತಿದ್ದರು. ಆ ಕಾಲದಲ್ಲಿ ಅದೊಂದು ಪ್ರತಿಷ್ಠೆಯೂ ಆಗಿತ್ತು. ಪ್ರಥಮ ಸರ್ವೆ ದಾಖಲೆಯಾದ ಶೌಟ್‌ಮೆನ್ ಸರ್ವೆ ಮತ್ತು ಸೆಟ್ಲ್‌ಮೆಂಟ್ ದಾಖಲೆ ಪುಸ್ತಕದಲ್ಲಿ 'ಬ್ಯಾರಿ-ಬ್ಯಾರ್ದಿ' ಎಂದು ಉಲ್ಲೇಖಿತಗೊಂಡಿದೆ. ಆದರೆ ನಂತರದ ದಿನಗಳಲ್ಲಿ ಬ್ಯಾರಿ ಎಂಬುದು ಅತ್ಯಂತ ನಿಕೃಷ್ಟ ಪದ

ಎಂದು ಭಾವಿಸಲಾಗುತ್ತಿತ್ತು. ಬ್ಯಾರಿಯೇತರರು ಬ್ಯಾರಿ ಮುಸಲ್ಮಾನರನ್ನು ಬ್ಯಾರಿ ಎಂದು ಕರೆಯುವುದು ತಮಗೆ ಅವಮಾನಕರ ಎಂದೂ ಬಗೆಯುತ್ತಿದ್ದರು. ಆದರೆ ಹದಿನೈದು ವರ್ಷದಿಂದೀಚೆಗೆ ಬ್ಯಾರಿ ಎಂದು ಕರೆಯಲು ಅಥವಾ ಕರೆಸಿಕೊಳ್ಳಲು ಹೆಮ್ಮೆ ಪಡುತ್ತಿರುವುದೂ ಕೂಡಾ ಕಂಡು ಬರುತ್ತಿದೆ. ಒಟ್ಟಿನಲ್ಲಿ ಜಿಲ್ಲೆಯ ಶಾಫಿ ಮದ್ಸಹಬ್ ಅಂಗೀಕರಿಸಿದ ಬ್ಯಾರಿ ಭಾಷೆಯನ್ನು ಮಾತನಾಡುವ ಮುಸಲ್ಮಾನರನ್ನು ಬ್ಯಾರಿ ಎಂದು ಕರೆಯಲಾಗುತ್ತಿದೆ ಎಂಬುದು ವಾಸ್ತವ ಸತ್ಯ[೮].

ಬ್ಯಾರಿ ಶಬ್ದದ ಉತ್ಪತಿಯ ಬಗ್ಗೆ ಇತಿಹಾಸಕಾರರು, ಬರಹಗಾರರು, ಬೇರೆ ಬೇರೆ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ, ಆದರೆ ಎಲ್ಲರ ಅಭಿಪ್ರಾಯದಂತೆ 'ಬ್ಯಾರ' ಎಂಬ ಪದದಿಂದ 'ಬ್ಯಾರಿ' ಎಂಬ ಶಬ್ದದ ಉತ್ಪತ್ತಿಯಾಗಿದೆ. ಆದರೆ ಭಾರತದ ಬಹುತೇಕ ಕಡೆ ಅದರಲ್ಲೂ ಪೂರ್ವ ಮತ್ತು ದಕ್ಷಿಣ ಕರಾವಳಿಯಲ್ಲೂ ಅರಬರ ಸಂಪರ್ಕ ಇತ್ತು. ಹಾಗಾಗಿ ಕೇವಲ ಪಶ್ಚಿಮ ಕರಾವಳಿಯ ಅದೂ ದಕ್ಷಿಣ ಕನ್ನಡ ಜಿಲ್ಲೆಯ ಮುಸಲ್ಮಾನರು ಮಾತ್ರ ಬ್ಯಾರಿಗಳಾಗುತ್ತಾರೆ? ದಖ್ಖನಿಗಳೆಂದು ಕರೆಯಲ್ಪಡುವ ಉರ್ದು ಮಾತನಾಡುವ ದಕ್ಷಿಣ ಕನ್ನಡ ಜಿಲ್ಲೆಯ ಮುಸಲ್ಮಾನರನ್ನು ಯಾಕೆ ಬ್ಯಾರಿ ಎಂದು ಗುರುತಿಸಲಾಗುತ್ತಿಲ್ಲ? ಉರ್ದು ಮಾತನಾಡುವ ಈ ದಖ್ಖನಿಗಳಲ್ಲೂ ಕೂಡಾ ವ್ಯಾಪಾರ ಮಾಡುತ್ತಿರಲಿಲ್ಲವೇ? ಎಂಬ ಪ್ರಶ್ನೆಗೆ ಸದ್ಯ ಉತ್ತರ ಸಿಗುತ್ತಿಲ್ಲ. ಆದರೆ ಈಗಲೂ ಬ್ಯಾರಿ ಎಂಬ ಪದದ ಬಳಕೆ ಅವಮಾನಕರವಾಗಿದೆ ಎಂದು ಹೇಳುವ ಬಹುತೇಕ ಜನರೂ ಇದ್ದಾರೆ. ಅವರ ಅಭಿಪ್ರಾಯದಂತೆ ಬ್ಯಾರಿ ಎಂಬ ಪದವು ತುಳುನಾಡಿನ ಹಿಂದೂಗಳು, ಅವರ ಕೈಕೆಳಗಡೆ ಕೆಲಸಮಾಡುತ್ತಿದ್ದ ಮುಸ್ಲಿಮರನ್ನು ಅವಮಾನಕರವಾದ ರೀತಿಯಲ್ಲಿ 'ಬ್ಯಾರಿ'ಗಳು ಎಂದು ಕರೆಯುತ್ತಿದ್ದರು. ಆದುದರಿಂದ ಮುಸ್ಲಿಮರನ್ನು ದ.ಕ. ಜಿಲ್ಲೆಯಲ್ಲಿ 'ಬ್ಯಾರಿ'ಗಳು ಎಂದು ಕರೆಯುವುದನ್ನು ವಿರೋಧಿಸುತ್ತಿದ್ದರು[೯]. ಇತ್ತೀಚೆಗೆ ದ.ಕ. ಜಿಲ್ಲೆಯ ಮುಸ್ಲಿಮರು 'ಬ್ಯಾರಿ' ಪದವನ್ನು ಹೆಮ್ಮೆಯಿಂದ ಬಳಸಿ, ಬ್ಯಾರಿ ಎಸೋಸಿಯೇಶನನ್ನು ಪ್ರಾರಂಭಿಸಿ ತಮ್ಮನ್ನು ಗುರುತಿಸಲ್ಪಡುತ್ತಿದ್ದಾರೆ[೧೦].

## ೨.೨ ಬ್ಯಾರಿಗಳ ಮೂಲ

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆ ಕೇರಳದ ಕಾಸರಗೋಡು ಜಿಲ್ಲೆಯನ್ನೊಳಗೊಂಡ ಬೈಂದೂರಿನಿಂದ ಕಾಸರಗೋಡಿನವರೆಗಿನ, ಪ್ರಾಚೀನ ತುಳುನಾಡೆಂಬ ಪ್ರದೇಶದಲ್ಲಿ ಸ್ಥಳೀಯರಾಗಿ ಬೆಳೆದು ಬಂದ ಮುಸ್ಲಿಮರನ್ನು 'ಬ್ಯಾರಿ'ಗಳೆಂದು ಕರೆಯುತ್ತೇವೆ. ಕರಾವಳಿಯ ಮುಸ್ಲಿಮರಲ್ಲಿ ಪ್ರಾಚೀನ ಕಾಲದಲ್ಲಿ ಶೇಕಡಾ ೯೫ರಷ್ಟು ವ್ಯಾಪಾರ ಕಸುಬನ್ನೇ ಆಧರಿಸಿಕೊಂಡಿದ್ದ ಜನ ಸಮುದಾಯಕ್ಕೆ ಕಸುಬಾಧರಿಸಿ ನೀಡಿದ ಸ್ಥಳೀಯ ಹೆಸರೇ ಬ್ಯಾರಿಗಳು. ಬ್ಯಾರಿ ಎಂಬುದು ತುಳು ಪದವಾಗಿದ್ದು, ವ್ಯಾಪಾರವನ್ನು 'ಬ್ಯಾರ' ಎಂದೂ ಅದನ್ನೇ ಕಸುಬಾಗಿರಿಸಿದವರನ್ನು 'ಬ್ಯಾರಿ' ಎಂದು ಕರೆಯಲಾಗುತ್ತದೆ. 'ಬ್ಯಾರಿ' ಪದದ ಮೂಲದ ಬಗ್ಗೆ ಎಲ್ಲಾ ಚರಿತ್ರೆಕಾರರೂ ಸಹಮತ ಬ್ಯಾರಿಗಳು ಸ್ಥಳೀಯರೊಡನೆ ಅರಬ ಸಂಪರ್ಕದಿಂದ ಉಂಟಾದ ಸಮುದಾಯವೆಂಬುದನ್ನು ಕೂಡಾ ಇತಿಹಾಸಕಾರರು ಸಮರ್ಥಿಸಿದ್ದಾರೆ. ಪ್ರಸಿದ್ಧ ಇತಿಹಾಸಕಾರ ತಾರಾಚುದರ ಅಭಿಪ್ರಾಯದಂತೆ ಪೋರ್ಚುಗೀಸರು ಕರಾವಳಿಯಲ್ಲಿ ವ್ಯಾಪಾರ ಸ್ಥಾಪಿಸುವವರೆಗೂ, ಅಂದರೆ ೧೪ನೆಯ ಶತಮಾನದವರೆಗೂ ಅರಬ ವ್ಯಾಪಾರ ನಿರಂತರವಾಗಿ ನಡೆಯುತ್ತಿತ್ತು. ಅರಬರು ವ್ಯಾಪಾರಕ್ಕಾಗಿ ಕರಾವಳಿಯುದ್ದಕ್ಕೂ ನೆಲೆ ನಿಲ್ಲುತ್ತಿದ್ದರು. ಸ್ಥಳೀಯ ಮಹಿಳೆಯರನ್ನು ವಿವಾಹವಾಗುತ್ತಿದ್ದರು. ಅವರ ಸಂತಾನಗಳು ಮುಸ್ಲಿಮರಾಗಿ ಬೆಳೆದರು, ಇಂತಹ ಜನರು ಕರಾವಳಿಯುದ್ದಕ್ಕೂ ಕಚ್, ಕಲ್ಯಾಣ, ಬೋಚ್, ಕೊಂಕಣ, ಮಲಬಾರ್ ಕರಾವಳಿಯಲ್ಲೂ ಸಾಮಾನ್ಯವಾಗಿದ್ದು, ಸ್ಥಳೀಯರಾದ ಮುಸ್ಲಿಂ ಸಮುದಾಯಗಳು ಉಂಟಾಗಿವೆ. ೯ ಮತ್ತು ೧೦ನೇ ಶತಮಾನದ ಅರಬ್ ಬರಹಗಾರರಾದ ಇಬಾನ್ ಕುರ್ದದ್‌ಬಾ ಮತ್ತು ಹೌಕಲ್‌ರ ಬರಹಗಳಲ್ಲಿ ಅರಬ ವ್ಯಾಪಾರ ಬೆಳೆದು ಬಂದ ವಿಚಾರವನ್ನು ತಿಳಿಸಲಾಗಿದೆ[೧೧]. ಕ್ರಿ.ಶ ಮೊದಲನೆಯ ಶತಮಾನದಿಂದಲೇ ಅರಬ ವ್ಯಾಪಾರ ದಾಖಲೆಯನ್ನು ಪರಿಶೀಲಿಸಿದರೆ ಅರಬ ವ್ಯಾಪಾರ ಸಂಬಂಧ ಕರಾವಳಿಯ ಜಿಲ್ಲೆಗಳಲ್ಲಿತ್ತು[೧೨].

ಇತಿಹಾಸ ದಾಖಲೆಯನ್ನು ಪರಿಶೀಲಿಸಿದರೆ ಅರಬ ವ್ಯಾಪಾರ ಸಂಪರ್ಕ ಪ್ರಾಚೀನಕಾಲದಿಂದಲೇ ಇದ್ದು. ಬಾರಕೂರು, ಮಂಗಳೂರು, ಉಳ್ಳಾಲ, ಮಂಜೇಶ್ವರ ಮತ್ತು

ಕಾಸರಗೋಡು, ವ್ಯಾಪಾರ ಕೇಂದ್ರಗಳಾಗಿದ್ದು, ಅಲ್ಲೆಲ್ಲಾ ಮುಸ್ಲಿಂ ಸಮುದಾಯ ಬೆಳೆಯಿತೆಂಬುದನ್ನು ಗಣಪತಿರಾವ್ ಐಗಳ್ ತಿಳಿಸಿದ್ದಾರೆ. ಡಾ. ಟೈಟಸ್‌ರಲ್ಲದೆ ಇತರ ಹಲವಾರು ಚರಿತ್ರೆಕಾರರೂ, ಅರಬ ಸಂಪರ್ಕದಿಂದುಂಟಾದ ಹೊಸ ಸಮುದಾಯವೇ ಕರಾವಳಿಯ ಮುಸ್ಲಿಮರೆಂದು ತಿಳಿಸಿದ್ದಾರೆ. ಸ್ಥಳೀಯ ಭಾಷೆ ಸಂಸ್ಕೃತಿಯನ್ನಾಧರಿಸಿ ಬೆಳೆದ ಮುಸ್ಲಿಂ ಸಮುದಾಯವಾಗಿರುವಂತೆಯೇ ತುಳುನಾಡಿನ 'ಬ್ಯಾರಿ'ಗಳು ಕೂಡಾ ಸ್ಥಳೀಯವಾಗಿ ಬೆಳೆದು ಬಂದ ಒಂದು ಸಮುದಾಯವಾಗಿದೆ.

ಭಾರತದಾದ್ಯಂತ ಇದ್ದ ಜಾತೀಯ ವರ್ಗೀಯ ಪದ್ಧತಿಗಳು, ಅಸ್ಪೃಶ್ಯತಾವಾದ, ಸಮಾಜದ ಕೆಳಸ್ತರದ ಜನರನ್ನು ಸಮಾನತೆಯುಳ್ಳ ಜನರಾಗಿ ಪರಿವರ್ತಿಸಲು, ಅರಬ ಸಂಪರ್ಕ ನೆರವಾಯಿತು. ಇದರಿಂದಾಗಿ ಬ್ಯಾರಿಗಳ ಬೆಳವಣಿಗೆಗೂ ಅನುಕೂಲವಾಯಿತು. ವ್ಯಾಪಾರದ ಆಕರ್ಷಣೆಯೂ, ರಾಜರ ಪ್ರೋತ್ಸಾಹವೂ, ದೀನಾರ್ ಮಿಶನರಿಗಳ ಪ್ರಭಾವವೂ, ಸೂಫಿ ಸಂತರ ಭೋಧನೆಗಳೂ ತೀವ್ರವಾಗಿ ಮುಸ್ಲಿಮರು ವೃದ್ಧಿಯಾಗಲು ಕಾರಣವಾಯಿತು. ಬನವಾಸಿಯ ಕದಂಬ ಅರಸರ ಆಡಳಿತ ಕಾಲದಲ್ಲಿ ತುಳುನಾಡಿನ ಪ್ರದೇಶಕ್ಕೆ ಬ್ರಾಹ್ಮಣ ಮನೆತನಗಳನ್ನು ತಂದು ಸ್ಥಾಪಿಸಲಾಯಿತೆಂದು ಇತಿಹಾಸ ತಿಳಿಸುತ್ತದೆ. ಅವರ ನಂತರ ಜೈನರೂ ಬಂದು ನೆಲೆಸಿದರು. ಮೇಲ್‌ಸ್ತರದ ಅಭಿಮಾನವಿದ್ದ ಬ್ರಾಹ್ಮಣರು ಬಂದು ನೆಲೆಸಿ, ವೈದಿಕ ಧರ್ಮ ಪ್ರಚಾರಕ್ಕೆ ತೊಡಗಿದಾಗ, ಈ ಪ್ರದೇಶದ ಪರಿಶಿಷ್ಟ ವರ್ಗ ಮತ್ತು ಪಂಗಡದ, ಬಿಲ್ಲವರೂ ಅಸ್ಪೃಶ್ಯರಾದರು. ಅವರು ಕಡೆಗಣಿಸಲ್ಪಟ್ಟರಲ್ಲದೆ ಹಿಂಸಿಸಲ್ಪಟ್ಟರು. ಬ್ರಾಹ್ಮಣ ಮತ್ತು ಜೈನ ಪ್ರಭುತ್ವ ಬೆಳೆದಂತೆಲ್ಲ ದಲಿತರು ದುಃಸ್ಥಿತಿಗೆ ತಳ್ಳಲ್ಪಟ್ಟರು. ತುಳುನಾಡಿನಾದ್ಯಂತ ಜೈನ ಹೆಗ್ಗಡೆ ಹಾಗೂ ಬಲ್ಲಾಳರ ಮನೆತನಗಳೂ ಬೀಡುಗಳೂ ಸ್ಥಾಪಿಸಲ್ಪಟ್ಟವು. ಅಸ್ಪೃಶ್ಯರಾದ ದಲಿತವರ್ಗಕ್ಕೆ ಕನಿಷ್ಟ ಜೀವನಾನುಕೂಲತೆಗಳನ್ನು ಪಡೆಯಲು ಕೂಡಾ ಅನರ್ಹರಾಗಿ ಊರಿನಿಂದಾಚೆ ತಳ್ಳಲ್ಪಟ್ಟರು. ಬ್ರಾಹ್ಮಣರು ಕೂಡಾ ಅವರನ್ನು ಹೊರಗಿಟ್ಟರು. ಅವರಿಗೆ ಮೇಲ್‌ಸ್ತರದ ಜನರೊಡನೆ ವ್ಯವಹರಿಸುವ ಸೌಲಭ್ಯಗಳನ್ನು ಪಡೆಯುವ, ಒಂದೇ ಕಡೆ ಬದುಕುವ ಅವಕಾಶಗಳೂ ಕೂಡಾ ಇರಲಿಲ್ಲ. ಅವರಿಗೆ ಹಿಂದೂ ದೇವಾಲಯಗಳತ್ತ ಬರುವ ಹಕ್ಕು ಇರಲಿಲ್ಲ. ಇದಲ್ಲದೆ ಬ್ರಾಹ್ಮಣ ಧರ್ಮದ ವೈದಿಕ ವಿಧಿಗಳನ್ನು ಕಟ್ಟುನಿಟ್ಟಾಗಿ

ಪಾಲಿಸುತ್ತಿದ್ದುದರಿಂದ, ಮಾನವ ಸಹಜ ತಪ್ಪುಗಳಿಗೆ ಬಲಿಯಾಗಿ ಧರ್ಮ ಭ್ರಷ್ಟರಾದ ಹಿಂದುಗಳ ಪರಿಸ್ಥಿತಿಯು ಕೂಡಾ ಶೋಚನೀಯವಾಗಿತ್ತು. ಈ ರೀತಿ ಧರ್ಮ ಭ್ರಷ್ಟರಾಗಿ ದಲಿತರಿಗಿಂತಲೂ ಕಡೆಯಾದ ಜನರಿಗೆ ಇಸ್ಲಾಮಿನಂತಹ ಸಮಾನತೆ ಮತ್ತು ಮಾನವೀಯ ಸಹಬಾಳ್ವೆಯನ್ನು ಸಾರುವ ಧರ್ಮವು ಒಂದು ವರದಾನವಾಗಿತ್ತು. ಇದೇ ರೀತಿ ಬ್ರಾಹ್ಮಣ ಜೈನಧರ್ಮದ ಪರಿಣಾಮವಾಗಿ, ಕೊರಗರು, ಪರಿಶಿಷ್ಟ ವರ್ಗದವರು, ಬಿಲ್ಲವ ವರ್ಗದ ಜನರೂ ಅಸ್ಪೃಶ್ಯರಾಗಿ ಮಾನವೀಯ ಸ್ಥಾನಮಾನಗಳನ್ನು ಕಳೆದುಕೊಂಡಾಗ, ಸಮಾನತೆಯ ಧರ್ಮವಾದ ಇಸ್ಲಾಂ ಆಶ್ರಯ ನೀಡಿ ಆಹ್ವಾನಿಸಿತು. ಹಿಂದೂ ಜಾತಿ ಪದ್ಧತಿಯ ಕಟ್ಟುನಿಟ್ಟಾದ ಕ್ರೂರ ವಿಧಿವಿಧಾನಗಳಿಂದ ಸಹಬಾಳ್ವೆಯ ಸಂತೃಪ್ತಿಯಿಂದ ದೂರವಾದ ಕೆಳಸ್ತರದ ಜನರು ಬಹುಸಂಖ್ಯೆಯಲ್ಲಿ ಹೊಸಧರ್ಮವನ್ನು ಸೇರಿಕೊಂಡು ಆಶ್ರಯ ಪಡೆದವರೆಂದು ಎಡ್ವರ್ಡ್ ತರ್ಸ್ಟನ್ 'ಕಾಸ್ಟ್ ಆಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ' ಎಂಬ ಕೃತಿಯಲ್ಲಿ ತನ್ನ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ[೧೩].

ಪಶ್ಚಿಮ ಕರಾವಳಿಯಲ್ಲಿ ಮುಸ್ಲಿಮರು ಬಹುಬೇಗನೇ ವೃದ್ಧಿಯಾಗಲು, ಬಹುಸಂಖ್ಯೆಯಲ್ಲಿ ಮತಾಂತರಗೊಂಡ ಕೆಳಸ್ತರದ ಜನರೇ ಕಾರಣ. ಹಾಗೆಯೇ ಮುಂದುವರಿದಿದ್ದರೆ ಸಂಪೂರ್ಣ ಕೆಳಸ್ತರದ ಜನರು ಇಸ್ಲಾಂ ಧರ್ಮಕ್ಕೆ ಮತಾಂತರಗೊಳ್ಳುತ್ತಿದ್ದರು ಎಂದು ಅರ್‌ನಾಲ್ಡ್ ಬರೆದಿದ್ದಾನೆ. ಮೇಲ್‌ಸ್ತರದ ದಬ್ಬಾಳಿಕೆ ಮತ್ತು ಜಾತಿಕಟ್ಟಳೆಯಿಂದ ಬೇಸತ್ತ ಜನರು ತಾನಾಗಿಯೇ ಸ್ವತಂತ್ರ ಸಹಬಾಳ್ವೆಯ ಉತ್ತಮ ಜೀವನಕ್ಕಾಗಿ ಮನಸಾರೆ ಒಪ್ಪಿ ಇಸ್ಲಾಂಮನ್ನು ಸ್ವೀಕರಿಸಿದ್ದರು. ಅವರ ಮೇಲೆ ಒತ್ತಡ ಹೇರುವಂತಹ ಯಾವ ಶಕ್ತಿಯೂ ಇಲ್ಲಿರಲಿಲ್ಲ. ಅಸ್ಪೃಶ್ಯರಾಗಿ ಹೀನಾಯ ಬದುಕನ್ನು ತೊರೆದು, ಸಮಾನತೆಯ ನೆಮ್ಮದಿಯ ಬದುಕಿಗಾಗಿ ಪರಿವರ್ತನೆಗೊಂಡರು. ಹೀಗೆ ಮತಾಂತರಗೊಂಡ ಕೆಳಸ್ತರದವರು, ಮೇಲ್‌ಸ್ತರದ ಜನರಲ್ಲಿ ಸೇರಿ ಗೌರವದ ಸ್ಥಾನ ಪಡೆದ ನಿದರ್ಶನಗಳಿವೆ. ಲೋಗನ್, ಕೆಳಸ್ತರದ ಜನರ ಮತಾಂತರ ಗುಲಾಮತನದಿಂದ ಬಿಡುಗಡೆಗೊಳ್ಳುವ ಮಾರ್ಗವಾಗಿ ಕೆಳಸ್ತರದ ಜನರಿಗೆ ವರದಾನವಾಗಿತ್ತೆಂದು ಬರೆದಿದ್ದಾನೆ. ಇದರಿಂದ ಕರಾವಳಿ ಪ್ರದೇಶದಲ್ಲಿ ಹೇರಲ್ಪಟ್ಟ ಜಾತಿಪದ್ಧತಿಯ ಪರಿಣಾಮವಾಗಿ ಕೆಳಸ್ತರದ ಜನರೂ ಧರ್ಮ ಭ್ರಷ್ಟರೂ,

ಅಸ್ಪೃಶ್ಯರೂ ಆದ ಜನ ಸಮುದಾಯ, ಇಸ್ಲಾಮಿನ ಸಹಬಾಳ್ವೆ ಮತ್ತು ಸಮಾನತೆಯಿಂದ ಆಕರ್ಷಿತರಾಗಿ, ಮತಾಂತರಗೊಂಡರು ಮತ್ತು ಮುಸ್ಲಿಮರ ಸಂಖ್ಯಾವೃದ್ಧಿಗೆ ಕಾರಣರಾದರು.

## ರಾಜ ಮನೆತನದ ಪ್ರೋತ್ಸಾಹ

ಕೆನರಾ ಕರಾವಳಿಯಲ್ಲೂ ಮಲಬಾರಿನಲ್ಲೂ ಹಲವಾರು ಸ್ಥಳೀಯ ಅರಸುಮನೆತನಗಳಿದ್ದವು. ಚೌಟರು, ಬಂಗರು ಮುಂತಾದ ಜೈನ ಅರಸು ಮನೆತನಗಳು ತುಳುನಾಡಿನಲ್ಲಿ ಪ್ರಭಾವ ಬೀರಿದರೆ ಜಮಾರಿನ್ ಎಂಬ ಬ್ರಾಹ್ಮಣ ಮನೆತನ ಕಲ್ಲಿಕೋಟೆಯಲ್ಲಿ ಹಾಗೂ ಮಲಬಾರಿನಲ್ಲಿ ಪ್ರಭಾವ ಬೀರಿತ್ತು. ಅರಸು ಮನೆತನಗಳಿಗೆ ಅಂಗರಕ್ಷಕರಾಗಿ ಕಾವಲು ಭಟರಾಗಿ ಸೇವೆ ಮಾಡಲು ಧೃಡಕಾಯರಾದ ಜನರ ಅಗತ್ಯವಿತ್ತು. ಸೇನಾತುಕುಡಿಗಳಲ್ಲೂ ಧೃಡಕಾಯ ಜನರ ಅಭಾವವಿತ್ತು. ಮಣ್ಣಿನಲ್ಲಿ ದುಡಿವ ರೈತಾಪಿ ಜನರೂ, ಕಡಲಲ್ಲಿ ದುಡಿವ ಬೆಸ್ತ ಜನರೂ, ಸಾಮಾನ್ಯವಾಗಿ ಕೆಳಸ್ತರದವರಾಗಿದ್ದುದರಿಂದ, ರಾಜಮನೆತನಗಳಿಗೆ ಅವರು ಅಸ್ಪೃಶ್ಯರಾಗಿದ್ದು, ತಮ್ಮ ಸೇವೆಗೆ ಸೇರಿಸಿಕೊಳ್ಳುವಂತಿರಲಿಲ್ಲ. ಆದರೆ ವ್ಯಾಪಾರಿಗಳಾಗಿ ಕರಾವಳಿ ಪ್ರದೇಶದಲ್ಲಿ ತಳವೂರಿದ ಮುಸ್ಲಿಮರಿಗೆ ರಾಷ್ಟ್ರಕೂಟರಂತಹ ಬಲಶಾಲಿ ಅರಸು ಮನೆತನಗಳೇ ಗೌರವದಿಂದ ಸ್ವಾಗತ ನೀಡಿದ್ದವು. ಅಲ್ಲದೆ ಮುಸ್ಲಿಮರು ಬ್ರಾಹ್ಮಣ, ಜೈನ ಮನೆತನಗಳ ಗೌರವಕ್ಕೂ ಪಾತ್ರರಾಗಿದ್ದರು. ಕೇರಳದ ಜಮೋರಿನ್ ದೊರೆಗಳೂ, ಕರಾವಳಿಯ ಜೈನ ಅರಸರು ಅವರನ್ನು ಸ್ವಾಗತಿಸಿ, ತಮ್ಮ ಸೇವೆಯಲ್ಲೂ ಸೇರಿಸಿಕೊಂಡಿದ್ದರು. ಕೆಳಸ್ತರದ ಜನರು ಮುಸ್ಲಿಮರಾಗಿ ಮತಾಂತರಗೊಂಡಾಗ, ಜಾತಿಯ ಗುರುತು ಮಾಯವಾಗಿ, ಮುಸ್ಲಿಮರಾಗಿ ಅರಸು ಮನೆತನಗಳಲ್ಲಿ ಸೇವೆ ಮಾಡಲು ಸಾಧ್ಯವಾಗುತ್ತಿತ್ತು. ಇದರಿಂದಾಗಿ ಜಮೋರಿನ್ ದೊರೆಗಳೂ, ಜೈನ ಅರಸುಮನೆತನಗಳೂ, ದಲಿತರನ್ನೂ, ಬೆಸ್ತರನ್ನೂ ಮತಾಂತರಗೊಳ್ಳಲು ಪ್ರೋತ್ಸಾಹ ನೀಡುತ್ತಿದ್ದರು. ಮುಸ್ಲಿಮರಿಗೆ ಇಂತಹ ಅರಸುಗಳೇ ಮಸೀದಿಗಳನ್ನು ಕಟ್ಟಿಸಿಕೊಟ್ಟು ಅವರ ವ್ಯವಹಾರ ವಹಿವಾಟುಗಳನ್ನು ಪ್ರೋತ್ಸಾಹಿಸಿ, ನೆಲೆಯೂರುವಂತೆ ಪ್ರೋತ್ಸಾಹ ನೀಡುತ್ತಿದ್ದರು[೧೪]. ಅವರು ಧರ್ಮ ಪ್ರಚಾರಕ್ಕೂ ಪ್ರೋತ್ಸಾಹ ನೀಡುತ್ತಿದ್ದರು. ಕರಾವಳಿಯ ಮುಸ್ಲಿಮರಲ್ಲಿ ಬಹಳಷ್ಟು ಜನರು ಇಂತಹ ಪರಂಪರೆಯಿಂದ ಬಂದವರೇ ಆಗಿದ್ದಾರೆ.

## ಮಿಶನರಿಗಳ ಪ್ರಭಾವ

ಮಲಬಾರ್ ಮತ್ತು ತುಳುನಾಡ ಕರಾವಳಿಯಲ್ಲಿ ಇಸ್ಲಾಂನ ಪ್ರಚಾರ ದೀನಾರ್ ಮಿಶನರಿಗಳಿಂದ ಆರಂಭವಾಯಿತೆಂದು ಐತಿಹ್ಯ ಇದೆ. ಮಲೆಯಾಳಿ ದಾಖಲೆಗಳು ಮಿಶನರಿ ಪ್ರಚಾರಕ್ಕೆ ಸಮರ್ಥನೆ ನೀಡಿವೆ. ಈ ದಾಖಲೆಗಳಿಂದ ಇಸ್ಲಾಮಿನ ಆರಂಭವನ್ನು ಈ ರೀತಿ ತಿಳಿಯಬಹುದು. ಚೇರುಮಾನ್ ಪೆರುಮಾಳ್ ಮಲಬಾರಿನ ಕೊನೆಯ ಅರಸ. ಒಂದು ಹುಣ್ಣಿಮೆಯ ರಾತ್ರೆ ಆ ರಾಜನಿಗೊಂದು ಕನಸು ಬಿದ್ದಿತು, ಅದರ ಪ್ರಕಾರ ಮಕ್ಕಾನಗರದಲ್ಲಿ ಹುಣ್ಣಿಮೆಯ ಚಂದ್ರ ಬಾನಲ್ಲಿ ಬೆಳಗುತ್ತಾ ಮಧ್ಯ ಆಗಸಕ್ಕೇರಿದೆ. ಒಮ್ಮೆಲೆ ಇಬ್ಭಾಗವಾದ ಚಂದ್ರನ ಒಂದು ಭಾಗ ಕೆಳಗಿಳಿದು 'ಅಬು ಕುಬೈಸ್' ಬೆಟ್ಟದ ಮೇಲೆ ಬಿತ್ತು. ಆಮೇಲೆ ಎರಡು ಭಾಗಗಳು ಒಂದಾಗಿ ಅಸ್ತಂಗತವಾಯಿತು. ಈ ಕನಸಿನಿಂದಾಗಿ ಅರಸನ ಮನಸ್ಸಿನಲ್ಲೇನೋ ಕಳವಳ. ಕೆಲವು ಸಮಯದ ನಂತರ ಮಕ್ಕಾ ನಗರದಿಂದ ಹಿಂತಿರುಗುತ್ತಿದ್ದ ಸಿಂಹಳದ ಆದಂ ಬೆಟ್ಟದ ನಿವಾಸಿಗಳಾದ ಮುಸ್ಲಿಮರು, ದಾರಿಯಲ್ಲಿ ಪೆರುಮಾಳರ ರಾಜಧಾನಿಗೆ ಬಂದರು. ಅವರನ್ನು ಗೌರವದಿಂದ ಬರಮಾಡಿಕೊಂಡ ಅರಸ, ಮಕ್ಕಾ ನಗರದ ವಿಶೇಷ ವಾರ್ತೆಯನ್ನು ಕೇಳಿದ. ಅದರಲ್ಲೊಬ್ಬನಾದ ಶೈಖ್ ಸಿಕಾವುದ್ದೀನ್ ಎಂಬಂತಾ ಧರ್ಮ ಪ್ರಚಾರದ ಸುದ್ದಿಯನ್ನು ತಿಳಿಸಿದ. ಹುಣ್ಣಿಮೆಯ ದಿನ ಬಾನಲ್ಲಿ ಬೆಳಗುತ್ತಿದ್ದ ಚಂದ್ರ ಇಬ್ಭಾಗವಾಗಿ ಅಸ್ತಮಿಸಿದ ಪವಾಡದ ವಿವರವನ್ನು ತಿಳಿಸಿದ. ಪೆರುಮಾಳ್ ಅರಸ ಕಂಡ ಕನಸು ಸತ್ಯಘಟನೆ ಎಂದು ಅವರಿಂದ ತಿಳಿದಾಗ, ಅರಸನು ಅವನೊಡನೆ ಹಲವಾರು ಆಸ್ಥಾನದ ಗಣ್ಯರೂ, ಆ ಮಹಪ್ರವಾದಿಯನ್ನು ಕಣ್ಣಾರೆ ಕಾಣಬೇಕೆಂದು ನಿರ್ಧರಿಸಿಕೊಂಡರು. ಮಕ್ಕಾ ಸಂದರ್ಶನಕ್ಕಾಗಿ ಹೊರಟರು. ಮಕ್ಕಾ ಸಂದರ್ಶಿಸಿ, ಇಸ್ಲಾಂ ಧರ್ಮ ಸ್ವೀಕರಿಸಿದರು. ಅರಸರು ಹಿಂತಿರುಗುತ್ತಿದ್ದಾಗ ರೋಗಪೀಡಿತರಾದರು. ಅವರು ತನ್ನ ಅನುಯಾಯಿಗಳೊಂದಿಗೆ ಮಲಬಾರಿಗೆ ಹೋದಮೇಲೆ ಇಸ್ಲಾಮಿನ ಪ್ರಚಾರಕ್ಕೆ ಹಲವು ವರ್ಷಗಳ ನಂತರ, ಅನುಯಾಯಿಗಳಾದ ಮಾಲಿಕ್ ಬಿನ್ ದೀನಾರ್ ಮತ್ತು ಅವರ ಕುಟುಂಬವು ಮಲಬಾರಿಗೆ ತಲುಪಿತು. ಈ ಮಿಶನರಿ ಸಂಘವು ಕೊಡಂಗಲ್ಲೂರಿನಿಂದ ಮಲಬಾರಿನಾದ್ಯಂತ ಸಂಚರಿಸಿ ಪ್ರಚಾರ ಮಾಡಿದ್ದಲ್ಲದೆ ಹಲವೆಡೆಗಳಲ್ಲಿ

ಮಸೀದಿಗಳನ್ನು ಸ್ಥಾಪಿಸಿದರು. ಮಲಬಾರಿನಿಂದ ತುಳುನಾಡಿಗೆ ಪ್ರವೇಶಿಸಿ ಬಾರ್ಕೂರುವರೆಗೂ ತಲುಪಿದರು. ಕೆನರಾ ಕರಾವಳಿಯಲ್ಲಿ ಬಾರಕೂರು, ಮಂಗಳೂರು ಮತ್ತು ಕಾಸರಗೋಡ್‌ಗಳಲ್ಲಿ ಮಸೀದಿಗಳನ್ನು ಸ್ಥಾಪಿಸಿ, ಖಾಜಿಗಳನ್ನು ನೇಮಿಸಿದರು, ಎಂಬುದನ್ನು ಲೋಗಲ್ ಮಲಬಾರ್ ಮ್ಯಾನುವೆಲ್‌ನಲ್ಲಿ ವಿವರಿಸಿದ್ದಾರೆ. ಸಿ. ಗೋಪಾಲನ್ ನಾಯರ್ ಬರೆದ ಮಲಬಾರಿನ ಮಾಪಿಳ್ಳೆಯವರು ಎಂಬ ಪುಸ್ತಕದಲ್ಲಿ ಈ ಬಗ್ಗೆ ಮತ್ತಷ್ಟು ವಿವರಣೆಗಳಿವೆ.

## ಮುಸ್ಲಿಂ ವ್ಯಾಪಾರಿಗಳ ಪ್ರಭಾವ

೧೮೯೧ ರ ಸೆನ್ಸಸ್ ವರದಿ ಪ್ರಕಾರ ಕೆನರಾ ಜಿಲ್ಲೆಯಲ್ಲಿ ೯೫,೦೦೦ ವ್ಯಾಪಾರಗಳಿದ್ದರು[೧೫]. ಅವರಲ್ಲಿ ೯೦,೩೪೫ ಜನ ಮಾಪಿಳ್ಳೆ, ೨೧೦೪ ನವಾಯತರು, ಹಾಗಾಗಿ ೯೫,೦೦೦ ವ್ಯಾಪಾರಿಗಳಲ್ಲಿ ೯೨೪೪೯ ಮುಸ್ಲಿಂ ವ್ಯಾಪಾರಿಗಳಿದ್ದರೆಂದು ತಿಳಿಸಿದಂತಾಗಿದೆ. ಇದರಿಂದ ತುಳುನಾಡಿನ ವ್ಯಾಪಾರ ಸಂಪೂರ್ಣ ಮುಸ್ಲಿಮರ ಹತೋಟಿಯಲ್ಲಿತ್ತು ಎಂದು ಸ್ಪಷ್ಟವಾಗುತ್ತದೆ. ಇಲ್ಲಿ ಹೇಳಲಾದ ಮಾಪಿಳ್ಳೆಯರು ಸ್ಥಳೀಯ ಮುಸ್ಲಿಮರಾದ ಬ್ಯಾರಿಗಳು. ಸ್ಥಳೀಯ ಮೂಲ ನಿವಾಸಿಗಳು ಮುಸ್ಲಿಮರಾಗಿ ವ್ಯಾಪಾರ ಕಸುಬನ್ನೇ ಮೂಲಧಾರವಾಗಿರಿಸಿಕೊಂಡ ಕಾರಣದಿಂದಾಗಿ 'ಬ್ಯಾರಿ' ಅಂದರೆ ವ್ಯಾಪಾರಿಗಳೆಂದು ಕರೆಯಲ್ಪಟ್ಟರು. ಇಲ್ಲಿಯ ಇಡೀ ಮುಸ್ಲಿಂ ಸಮುದಾಯಕ್ಕೆ ಈ ಹೆಸರು ಅನ್ವಯವಾಯಿತು. ಮುಸ್ಲಿಮರಿಗಿದ್ದ ವ್ಯಾಪಾರಿ ಸಂಬಂಧವನ್ನು ಸೆನ್ಸಸ್ ವರದಿಯೇ ಸ್ಥಾಪಿಸಿಕೊಟ್ಟಿದೆ.

ಆದರೂ ಇಲ್ಲಿಯ ಮುಸ್ಲಿಮರೇಕೆ ಬ್ಯಾರಿಗಳಾದರು? ಎಂಬ ಕುತೂಹಲದ ಪ್ರಶ್ನೆ ಏಳಬಹುದು. 'ವ್ಯಾಪಾರ' ಮುಸ್ಲಿಮರಿಗೆ ಧಾರ್ಮಿಕವಾಗಿ ಅನುವದಿಸಲ್ಪಟ್ಟ ಕಸುಬಾಗಿದೆ. ಆರಂಭದಲ್ಲಿ ವ್ಯಾಪಾರಕ್ಕಾಗಿ ಬಂದು ಅರಬರ ಸಂಪರ್ಕ ಹೊಂದಿದ ಸ್ಥಳೀಯ ಮುಸ್ಲಿಮರು ವ್ಯಾಪಾರದಲ್ಲಿ ನೇರಭಾಗಿಯಾದರು. ಅಲ್ಲದೆ ಭೌಗೋಳಿಕವಾಗಿ ಈ ಜಿಲ್ಲೆಯು ಹಲವಾರು ನದಿಗಳನ್ನು ಹೊಂದಿದ್ದು ಹಿಂದಿನ ಕಾಲದಲ್ಲಿ 'ದೋಣಿ ಸಾಗಾಟವೇ' ಮುಖ್ಯ ಸಾರಿಗೆ ವ್ಯವಸ್ಥೆಯಾಗಿದ್ದುದರಿಂದ, ದೋಣಿ ನಡೆಸುವ ಕಸುಬಿನಲ್ಲಿ 'ಬ್ಯಾರಿಗಳೇ' ಇದ್ದುದರಿಂದಲೂ

'ವ್ಯಾಪಾರ' ಅವರ ಕಸುಬಾಗಿಯೇ ಉಳಿಯುವಂತಾಯಿತು[೧೬]. ಹೀಗಾಗಿ ಪ್ರಾಚೀನ ಕಾಲದ ಸಾಮಾಜಿಕ ಸ್ಥಿತಿಗತಿಗಳು, ಸ್ಥಳೀಯ ಮುಸ್ಲಿಮರನ್ನು 'ಬ್ಯಾರಿ'ಗಳಾಗಿ ರೂಪಿಸಲು ಕಾರಣವಾಯಿತು. ಪ್ರಭುತ್ವವಾದದ ಅಂದಿನ ಕಾಲದಲ್ಲಿ ಮೇಲ್‌ಸ್ತರದ ಜನರು ಸಾಮಾನ್ಯವಾಗಿ ಪ್ರಭುಗಳಂತೆ ಇದ್ದುದರಿಂದ 'ಬ್ಯಾರ' ಸಾಮಾನ್ಯರಿಗೆ ಜೀವನಾವಕಾಶ ನೀಡುವ ಸಂಪರ್ಕವಾಗಿ, 'ಬ್ಯಾರಿ'ಗಳ ಕೈಯಲ್ಲೇ ಉಳಿಯುವಂತಾಯಿತು. ಕೆಳಸ್ತರದ ಜನರಂತೆ ಅಸ್ಪೃಶ್ಯರಲ್ಲದ ಜನಸಮುದಾಯವಾಗಿ ಎಲ್ಲ ಜನಸಮುದಾಯದೊಡನೆಯೂ ಸಂಪರ್ಕವಿರಿಸಿಕೊಳ್ಳುವ ಅವಕಾಶ ಬ್ಯಾರಿಗಳಿಗಿತ್ತು. ಇದರಿಂದಾಗಿ ವ್ಯಾಪಾರ ಬ್ಯಾರಿಗಳ ಏಕಸ್ವಾಮಿತ್ವದಲ್ಲೇ ಬೆಳೆಯಿತು.

ಹಿಂದಿನ ಪಾಡ್ದನಗಳೂ, ಬರಹಗಳೂ 'ಬ್ಯಾರಿ' ವ್ಯಾಪಾರಿಗಳ ಬಗ್ಗೆ ತಿಳಿಸುತ್ತವೆ. ಮೈಸಂದಯ ಪಾಡ್ದನದಲ್ಲಿ ಬ್ಯಾರಿ ದೋಣಿಚಾಲಕನ ಬಗ್ಗೆ ವಿವರ ಇದೆ. ಪ್ರಾಚೀನ ಕಾಲದಲ್ಲಿ ವ್ಯಾಪಾರಕೂಟಗಳಿದ್ದುವು. ಮುಸ್ಲಿಮರ ಕೂಟಗಳಿವೆ ಹಂಜಿಮಾನಗಳೆಂದು ಕರೆಯುತ್ತಾರೆ. ಬಾರಕೂರು ಮತ್ತು ಮಂಗಳೂರುಗಳಲ್ಲಿದ್ದ ಪ್ರಖ್ಯಾತ ಹಂಜಿಮಾನಗಳ ಬಗ್ಗೆ ಶಾಸನಗಳು ತಿಳಿಸುತ್ತವೆ. 'ಬ್ಯಾರಿ' ವರ್ತಕ ಕೂಟಗಳು ಸಮಾಜದ ಗೌರವಕ್ಕೆ ಪಾತ್ರವಾಗಿದ್ದವು. 'ಬ್ಯಾರಿ'ಗಳು ಮೇಲ್ದರ್ಜೆಯ ಜನರೊಡನೆ ನಿಕಟ ಸಂಪರ್ಕ ಹೊಂದಿದ್ದು ಮೇಲು ಕೀಳು ಜಾತೀಯ ವರ್ಗಗಳ ಮಧ್ಯೆಯಿರುವ ಮಧ್ಯವರ್ತಿಗಳಾಗಿ ಸಾಮಾಜಿಕ ಸ್ಥಾನಮಾನಗಳಿಗೆ ಪಾತ್ರರಾಗಿದ್ದರು. ಆದರಿಂದಾಗಿ ಬಡತನ ಮತ್ತು ಸಂಕಷ್ಟಕ್ಕೊಳಗಾದ ಕೀಳ್ಜಾತಿಯ ಜನರು ಮುಸ್ಲಿಮರಾಗಿ ಪರಿವರ್ತನೆಗೊಳ್ಳಲು ಕಾರಣವಾಯಿತು. ಅಂದಿನ ಹಿಂದೂ ರಾಜ ಮನೆತನಗಳು ಮುಸ್ಲಿಂಮರಾಗಿ ಪರಿವರ್ತನೆಗೊಳ್ಳಲು ಕಾರಣವಾಯಿತು. ಅಂದಿನ ಹಿಂದೂ ರಾಜ ಮನೆತನಗಳು, ಮುಸ್ಲಿಂ ವ್ಯಾಪಾರಿಗಳೊಡನೆ ನಿಕಟ ಸಂಪರ್ಕವಿರಿಸಿಕೊಂಡಿದ್ದರು. ಅವರಿಗೆ ರಕ್ಷಣೆಯನ್ನು ಗೌರವದ ಸ್ಥಾನಮಾನಗಳನ್ನು ಒದಗಿಸಿದ್ದರು. ಅವರು ವ್ಯಾಪಾರಕ್ಕೆ ಪ್ರೋತ್ಸಾಹ ನೀಡಿ, ನಾಡಿನ ಸಮೃದ್ಧಿ ಹೆಚ್ಚಿಸಲು ಯತ್ನಿಸಿದರು. ಪೋರ್ಚುಗೀಸರ ಆಗಮನದವರೆಗೂ ಅವರ ವ್ಯಾಪಾರ ನಿರಾತಂಕವಾಗಿ ನಡೆದು ಬಂದಿತ್ತು. ಈ ವ್ಯವಹಾರ ಪ್ರಭಾವವೇ ತುಳುನಾಡಿನ ಮುಸ್ಲಿಮರು ಬ್ಯಾರಿಗಳಾಗಿ

ವೃದ್ಧಿಯಾಗಲು ಕಾರಣವಾಯಿತು. ತುಳುನಾಡಿನಲ್ಲಿ ಅತ್ಯಧಿಕ ಸಂಖ್ಯೆಯಲ್ಲಿರುವ ಮುಸ್ಲಿಮರು ಶಾಫಿಗಳು ಅದರಲ್ಲೂ ಬ್ಯಾರಿಗಳು ಬಹುದೊಡ್ಡ ವರ್ಗವಾಗಿದ್ದಾರೆ.

ಈ ರೀತಿ ಬ್ಯಾರಿಗಳ ಮೂಲವು ವ್ಯಾಪಾರದಿಂದ ಪ್ರಾರಂಭವಾಗಿ ರಾಜಮನೆತನಗಳ ಪ್ರೋತ್ಸಾಹದಿಂದ, ಮಿಶನರಿ ಪ್ರಭಾವದಿಂದ ಮತ್ತು ಸೂಫಿ ಸಂತರ ಪ್ರಭಾವದಿಂದಲೇ ಇಸ್ಲಾಂ ಪ್ರಚಾರಗೊಂಡಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ಯಾರಿ ಸಮುದಾಯದ ಜನಸಂಖ್ಯೆ ಹೆಚ್ಚಿತು[೧೭].

## ೨.೩ ಬ್ಯಾರಿ ಭಾಷೆ

ಮಾನವ ಸಮುದಾಯಕ್ಕೆ ಭಾಷೆ ಒಂದು ವ್ಯಾವಹಾರಿಕ ಸಾಧನ ಮಾತ್ರವಲ್ಲ. ಒಂದು ಮಾಧ್ಯಮವೂ ಹೌದು. ಪ್ರತಿಯೊಂದು ಜನಾಂಗಕ್ಕೆ ತಮ್ಮದೇ ಆದ ಭಾಷೆ, ಆಡು ಭಾಷೆಯಾದರೂ ಸರಿ ಒಂದಿದ್ದರೆ, 'ನಮ್ಮ ಭಾಷೆ' ಎನ್ನುವ ಪ್ರೀತಿ ಬೆಳೆಯುತ್ತದೆ. ಈ ರೀತಿಯಲ್ಲಿ ಕರಾವಳಿ ಜಿಲ್ಲೆಗಳಲ್ಲಿ, ತುಳು, ಕೊಂಕಣಿ, ಬ್ಯಾರಿ ಮತ್ತು 'ಮೋಯ' ಭಾಷೆಗಳು ಬೆಳೆದು ನಿಂತಿವೆ. ವಿಶೇಷವೆಂದರೆ ತುಳುವರು, ಕೊಂಕಣಿಗಳು, ಬ್ಯಾರಿಗಳು ಹಾಗೂ ಮೋಯರು ಎಂಬ ಭಾಷಾ ಪ್ರಧಾನ ನಾಮಗಳಿಂದಲೇ ಈ ಜನರು ಗುರುತಿಸಿಕೊಂಡಿರುವುದು ಒಂದು ಗಮನಾರ್ಹ ವಿಚಾರ. ಉಡುಪಿ, ದಕ್ಷಿಣ ಕನ್ನಡ ಸೇರಿದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೇರಳದ ಕಾಸರಗೋಡು ಜಿಲ್ಲೆ ಒಟ್ಟಾಗಿ ಬ್ರಿಟಿಷರ ಕಾಲದ ದಕ್ಷಿಣ ಕನ್ನಡ ಪ್ರಾಂತ್ಯವು ಈ ನಾಲ್ಕು ಆಡುಭಾಷೆಗಳ ಹೃದಯ ಕೇಂದ್ರವಾಗಿದೆಯೆಂದರೆ ಅತಿಶಯವಾಗದು.

ಭಾಷೆಗೂ, ಅದನ್ನಾಡುವ ಜನರ ಸಂಸ್ಕೃತಿಗೂ ಒಂದು ಸಂಬಂಧವಿರುತ್ತದೆ. ಭಾಷೆಯನ್ನು ಸ್ಥೂಲವಾಗಿ ಪರಿಶೀಲಿಸಿದಾಗ, ಆ ಜನರ ಪರಂಪರೆ, ಸಂಸ್ಕೃತಿ ಇತಿಹಾಸವೇ ಬೆಳಕಿಗೆ ಬರುತ್ತದೆ. ಅವರ ನಂಬಿಕೆ, ಆಚಾರ, ವಿಚಾರಗಳು ಮತ್ತು ವ್ಯವಹಾರಗಳು ಭಾಷೆಯ ಮೂಲಕ ಬಿಂಬಿಸಲ್ಪಡುತ್ತವೆ. ತುಳುನಾಡೆಂದೇ ಸುಪ್ರಸಿದ್ಧವಾಗಿದ್ದ ಕರಾವಳಿ ಜಿಲ್ಲೆಗಳಲ್ಲಿ ಪ್ರಾಯಶ: ತುಳುವಿನ ಉಪಭಾಷೆಯಾಗಿಯೂ, ಒಂದು ವಿಭಿನ್ನ ಜನಾಂಗದ ಭಾಷೆಯಾಗಿಯೂ ಬೆಳೆದು ಬಂದ ಭಾಷೆಯೇ ಬ್ಯಾರಿ ಭಾಷೆಯು[೧೮]. ಸಾಮಾನ್ಯ ಎಲ್ಲಾ ಭಾಷೆಗಳಲ್ಲೂ ಆಡುನುಡಿಯಲ್ಲಿ ವೈವಿಧ್ಯಗಳಿರುತ್ತವೆ. ಪ್ರಾದೇಶಿಕವಾಗಿಯೂ, ಜನಾಂಗೀಯವಾಗಿಯೂ,

ಇತಿಹಾಸದಲ್ಲಿ ಕಾಲೋಚಿತ ಬದಲಾವಣೆಯಾಗಿ ಆಡುವ ಭಾಷೆ ಬದಲಾವಣೆಗೊಳ್ಳುತ್ತದೆ. ಮೂಲತ: ಒಂದು ಪಂಗಡ ಅಥವಾ ಜನಾಂಗದ ಭಾಷೆಯಾಗಿ, ಕಾಲಾಂತರಗಳಿಂದ ಕಾಲೋಚಿತ ಬದಲಾವಣೆಗೊಳಗಾಗಿ ಸಾಹಿತ್ಯ ಬೆಳೆಯದಿದ್ದರೂ, ಜೀವಂತವಾಗಿ ಇಂದಿಗೂ ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯದಲ್ಲಿ ಉಳಿದಿರುವ ಮಾತನಾಡುವ ಭಾಷೆ 'ಬ್ಯಾರಿ ಭಾಷೆ' ಈ ಬ್ಯಾರಿ ಭಾಷೆಯನ್ನು ಇಂತಹ ಒಂದು ಉಪಭಾಷೆ ಎಂದು ತಿಳಿಯಲಾಗುತ್ತದೆ. ಅದಕ್ಕೆ ಮೂಲ ಭಾಷೆಯೊಂದಿರಬೇಕಾಗುತ್ತದೆ, ಆ ತಾಯಿ ಭಾಷೆ ಕೂಡಾ, ಬಹುಮಟ್ಟಿಗೆ ಪ್ರಭಾವ ವಿರಬಹುದಾದ 'ಉಪಭಾಷೆ' ಆಗಿರಬಹುದು. ಬ್ಯಾರಿ ಭಾಷೆಯ ತಾಯಿ 'ಭಾಷೆ' ತುಳು ಎಂದೇ ಖಚಿತವಾಗಿ ಹೇಳಬಹುದು. ಡಾ.ಸುಶೀಲಾ ಉಪಾಧ್ಯಾಯರವರು 'ಬ್ಯಾರಿ ಭಾಷೆಯ' ಜನಾಂಗೀಯ ಪ್ರಾಧಾನ್ಯತೆಯನ್ನು ಗುರುತಿಸಲಾರದೆ ಹೋದರೂ, ಮಾಪ್ಲಾಭಾಷೆ ಎಂದು ಹೆಸರಿಸಿದ್ದರೂ, ಈ ಭಾಷೆಯ ಮೂಲ ತಾಯಿಭಾಷೆ ತುಳು ಎಂಬುದನ್ನು ಸಾಧಾರವಾಗಿ ಸಮರ್ಥಿಸಿದ್ದಾರೆ. ಬ್ಯಾರಿ ಎಂಬ ಈ ಉಪಭಾಷೆಗೆ ಸಾಹಿತ್ಯಿಕ ಪ್ರಾಧಾನ್ಯ ಇಲ್ಲ. ಸಾಹಿತ್ಯ ಬೆಳೆಯಲಿಲ್ಲ. ಆದರೆ ವ್ಯವಹಾರ ಕಲೆ, ಪ್ರಾದೇಶಿಕತೆಯಲ್ಲಿ ವಿಶೇಷ ಸ್ಥಾನವನ್ನು ಪಡೆದಿದೆ. ತುಳು ಪಾಡ್ದನಗಳಿಂದ ಹಿಡಿದು, ಯಕ್ಷಗಾನಗಳವರೆಗಿನ ತುಳು ಸಾಂಸ್ಕೃತಿಕ ಪ್ರಭೇದಗಳಲ್ಲಿ ಬ್ಯಾರಿಗಳು ಮತ್ತು ಬ್ಯಾರಿ ಸಂಸ್ಕೃತಿಯ ಕುರಿತು ಧಾರಾಳ ಉಲ್ಲೇಖಗಳಿವೆ. ಸಮೀಪದ ನೆರೆರಾಜ್ಯವಾದ ಕೇರಳದ ಮಲೆಯಾಳ ಭಾಷೆಗೆ ಸಮೀಪ ಹೋಲಿಕೆ ಇದ್ದರೂ, ಈ ಭಾಷೆಯಲ್ಲಿ ಸಂಸ್ಕೃತ ಪದಗಳ ಬಳಕೆ ತೀರಾ ಕಡಿಮೆಯಾಗಿರುವುದಾದರೂ ಅರಬಿ ಪದಗಳ ಜತೆಗೆ ಧಾರಾಳ ತುಳುಪದಗಳು ಬಳಕೆಯಾಗಿರುವುದೂ, ಮಲೆಯಾಳ ಭಾಷೆಯ ವ್ಯಾಕರಣ ವಿಧಾನಗಳಾವುದೂ ಇದರಲ್ಲಿಲ್ಲದಿರುವುದೂ, ಉಚ್ಚಾರದಲ್ಲಿ ಕೂಡಾ ವ್ಯತ್ಯಾಸವಾಗಿರುವುದು, ಇದು ಮಲೆಯಾಳದ ಉಪಭಾಷೆಯಲ್ಲ, ತುಳುವಿನ ಉಪಭಾಷೆ ಎಂದೇ ಸಮರ್ಥಿಸಲು ಸಹಕಾರಿಯಾಗುವ ಆಧಾರಗಳಾಗಿವೆ[೨೦].

ಕಾಸರಗೋಡಿನಿಂದ ಮಂಗಳೂರಿನ ಉತ್ತರಕ್ಕಿರುವ ಮುಲ್ಕಿಯವರೆಗಿನ ಕರಾವಳಿಯಲ್ಲಿ ತುಳುಭಾಷೆಯು ಪ್ರಭಾವಶಾಲಿಯಾಗಿದೆ. ಇದರ ಜತೆಯಾಗಿಯೇ ಬ್ಯಾರಿ, ಮೋಯ, ಕೊಂಕಣಿ

ಭಾಷೆಗಳು ಇವೆ. ಇದರಲ್ಲಿ ಬ್ಯಾರಿಗಳು ಆಡುವ ಭಾಷೆಗೆ ಸಮೀಪವಾಗಿರುವ ಭಾಷೆ, ಮೋಯ ಭಾಷೆ. ಮೋಯ ಭಾಷೆ ಮಲೆಯಾಳದ ಉಪಭಾಷೆಯೆಂದೇ ಹೇಳಲಾಗುತ್ತದೆ. ಇವರ ಆಡುನುಡಿಗಳು ಮಲೆಯಾಳಕ್ಕೆ ಸಮೀಪವಾಗಿದ್ದು, ತುಳುಭಾಷೆಗೆ ದೂರವಾಗಿರುತ್ತದೆ. ಬ್ಯಾರಿ ಭಾಷೆಯನ್ನಾಡುವ 'ಬ್ಯಾರಿ ಜನಾಂಗ' ಈಗ ಮಲೆಯಾಳಿಗಳಂತೆ, ವಿಸ್ತಾರವಾಗಿ ಹಬ್ಬಿಕೊಂಡಿದ್ದಾರೆ. ಬೆಂಗಳೂರು ನಗರದಲ್ಲೂ ಸಾಕಷ್ಟು ಜನ ಬ್ಯಾರಿಗಳಿದ್ದಾರೆ. ಆದರೆ ಅವರಮೂಲ ಕೇಂದ್ರ ಸ್ಥಾನ ತುಳುನಾಡು, ಇವರು ವ್ಯಾಪಾರವನ್ನೇ ಪ್ರಧಾನವಾಗಿರಿಸಿಕೊಂಡಿರುವುದರಿಂದ, ತುಳುಭಾಷೆಯ ಬ್ಯಾರಿಗಳಾಗಿದ್ದಾರೆ. ವ್ಯಾಪಾರಕ್ಕಾಗಿ ಯಾವ ಮೂಲೆಗೆ ಬೇಕಾದರೂ ಸಂಚರಿಸಬಲ್ಲ ನೆಲೆಯೂರಬಲ್ಲ ಸ್ವಭಾವನ್ನು ಬ್ಯಾರಿ ಸಮುದಾಯಹೊಂದಿದೆ.

ಬ್ಯಾರಿ ಭಾಷೆಯು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗಿದೆ. ಸುರತ್ಕಲ್, ಕೃಷ್ಣಾಪುರ, ಜೋಕಟ್ಟೆ ಸುತ್ತಮುತ್ತಲಿನ ಪ್ರದೇಶದ ಭಾಷೆ ಇನ್ನೊಂದು ರೀತಿಯಾಗಿದೆ. ಅದೇ ರೀತಿ ಮಂಜನಾಡಿ, ಅರ್ಕುಲ, ಕಲ್ಲಡ್ಕ, ಬಂಟ್ವಾಳ ಬ್ಯಾರಿಗಳು ಆಡುವ ಭಾಷೆಯಲ್ಲೂ ಬದಲಾವಣೆ ಇದೆ. ಬ್ಯಾರಿ ಭಾಷೆಗೆ ಮೂಲ ಹಳೆಗನ್ನಡ ಆದ್ದರಿಂದ ಹಳೆಗನ್ನಡದ ಹಲವಾರು ಪದಗಳು ಬ್ಯಾರಿ ಭಾಷೆಯಲ್ಲಿವೆ ಎಂದು ಹೇಳಲಾಗಿದೆ. ಉದಾ: ಮದ್‌ಲ್, ಸಪುರ, ಪುಲಿ, ತೋರ, ಕಡ, ರಾವು ಇತ್ಯಾದಿ ಹಳೆಗನ್ನಡದಲ್ಲಿ ಕಾಣಸಿಗುತ್ತವೆ. ಬ್ಯಾರಿ ಭಾಷೆಯು ತುಳು ವ್ಯಾಕರಣ ಶೈಲಿಯನ್ನೆ ಹೋಲುತ್ತದೆ. ಇದರಲ್ಲಿ ಶೇ 50 ರಷ್ಟು ಪದಗಳು ತುಳುಭಾಷೆಯದ್ದೇ ಆಗಿವೆ. ಅಲ್ಲದೆ ಬ್ಯಾರಿ ಭಾಷೆಯಲ್ಲಿ ಅರಬಿ, ತೆಲುಗು, ತಮಿಳು, ಮಲೆಯಾಳಂ, ಕೊಡವ, ಉರ್ದು ಭಾಷೆಗಳ ಪದಗಳೂ ಇವೆ. ಬ್ಯಾರಿ ಭಾಷೆಯನ್ನು ನಕ್ಕನಿಕ್ಕ್, ಮೈಕಾಲ್ತೆ ಭಾಷೆ, ಮಾಪ್ಲಾ ಭಾಷೆ, ಮಂಗಳೂರು ಮಲಯಾಳಂ, ಮಾಮಲಿ ಇತ್ಯಾದಿಯಾಗಿ ಬ್ಯಾರಿಗಳ ಸಹಿತ ಅನ್ಯರು ಗುರುತಿಸಿದ್ದುಂಟು[೨೧]. ಆದರೆ ಇದೀಗ ಬ್ಯಾರಿಗಳು ತಮ್ಮ ಭಾಷೆಯನ್ನು ಬ್ಯಾರಿ ಭಾಷೆ ಎಂದು ಗುರುತಿಸುತ್ತಾರಲ್ಲದೆ, ಬ್ಯಾರಿಗಳು ಎಂದು ಕರೆಯಲು ಹೆಮ್ಮೆ ಪಡುತ್ತಾರೆ. ಇಷ್ಟೆಲ್ಲಾ ಹಿರಿಮೆ, ಗೌರವ ಇರುವ ಬ್ಯಾರಿ ಭಾಷೆಗೆ ಲಿಪಿ ಇಲ್ಲ ಎಂಬ ಅಭಿಪ್ರಾಯ ವ್ಯಕ್ತವಾಗಿದೆ[೨೨].

ಬಿ.ಎಂ. ಇಚ್ಲಂಗೋಡುರವರು ಬ್ಯಾರಿ ಭಾಷೆಗೆ ಲಿಪಿ ಇದೆ ಎಂದು ವಾದಿಸುತ್ತಾರೆ[೧೩]. ಅವರ ಅಭಿಪ್ರಾಯದಂತೆ ಬಟ್ಟೆ ಬರಹ ಅಥವಾ ಬಟ್ಟೆಳಿತ್ತು ಎನ್ನುವ ಬರಹ ನೂರಾರು ಬ್ಯಾರಿ ಕುಟುಂಬಗಳಲ್ಲಿ ಬಳಕೆಯಾಗುತ್ತಿದ್ದು, ಹಲವಾರು ಇಂತಹ ದಾಖಲೆಗಳ ಸಂಗ್ರಹ ಇವರಲ್ಲಿದೆ. ಬಿ.ಎಂ ಇಚ್ಲಂಗೋಡು ಮನೆತನದ ಹಿರಿಯರ ದಾಖಲೆಗಳು ಬ್ಯಾರಿ ಲಿಪಿಯಲ್ಲಿದ್ದು, ಅದರ ಸಂಶೋಧನೆಯಾಗುವ ಮೊದಲೇ ಅವರು ಕಣ್ಮರೆಯಾದುದರಿಂದ ಅವುಗಳನ್ನು ಓದಲು ಸಾಧ್ಯವಾಗಲಿಲ್ಲ. ಮೊಗ್ರಾಲ್, ಮಂಜೇಶ್ವರ, ಕುಂಬಳೆ, ಮಂಗಳೂರು ಬಂಟ್ವಾಳಗಳಲ್ಲೂ ಈ ಲಿಪಿಯನ್ನು ಬಳಸುತ್ತಿದ್ದರು. ಮುಸ್ಲಿಮೇತರರು ಇದನ್ನು 'ಬ್ಯಾರಿ ಲಿಪಿ' ಎಂದೇ ಕರೆಯುತ್ತಿದ್ದರು. ಬ್ಯಾರಿಗಳ ಹೊರತಾಗಿ, ಬೇರಾರೂ ಈ ಲಿಪಿಯನ್ನು ಬಳಸಿದ ದಾಖಲೆಗಳಿಲ್ಲ. ಬೆರಳೆಣಿಕೆಯಷ್ಟೇ ಅಕ್ಷರಗಳು ಮಾತ್ರ ಇದೆಯೆಂದು ಹಿರಿಯ ಬ್ಯಾರಿಯೊಬ್ಬರು ಹೇಳಿದ್ದರು. ಆದರೆ ಈ ಲಿಪಿಯ ಕುರಿತು ಇನ್ನಷ್ಟು ಸಂಶೋಧನೆ ಆಗಬೇಕು. ಅಧ್ಯಯನವಾಗಬೇಕು ಎಂಬುದು ಬಿ.ಎಂ ಇಚ್ಲ್ಂಗೋಡುರವರ ಅಭಿಪ್ರಾಯ[೧೪].

ಶ್ರೀಮತಿ ಸುಶೀಲಾ ಉಪಾಧ್ಯಾಯರು, 'ಮಾಪಿಲ್ಲ ಮಲೆಯಾಳಂ' ಎಂಬ ಹೆಸರಿನಲ್ಲಿ ಬ್ಯಾರಿ ಭಾಷೆಯ ಕುರಿತು ಅಧ್ಯಯನ ನಡೆಸಿದ್ದಾರೆ. ಅವರು ಮುಖ್ಯವಾಗಿ ಕೆಲವು ವಿಚಾರಗಳನ್ನು ಹೊರಗೆಡಹಿದ್ದಾರೆ. ಬ್ಯಾರಿ ಭಾಷೆಯು ತುಳುನಾಡಿನ ಬ್ಯಾರಿಗಳಿಂದ ಮಾತ್ರ ಆಡಲ್ಪಡುತ್ತದೆ. ತೋರಿಕೆಗೆ ಇದು ಮಲೆಯಾಳದ ಉಪಭಾಷೆಯಂತಿದೆ. ಆದರೆ ಧಾರಾಳ ಅರಬಿ – ಪರ್ಶಿಯನ್ ಪದಗಳು ಬಳಕೆಯಾಗಿವೆ. ಅಲ್ಲದೆ, ಕೇರಳದ ಮಲೆಯಾಳಿ ಭಾಷೆಗಿಂತ ಭಿನ್ನವಾಗಿದೆ ಈ ಭಾಷೆಯಲ್ಲಿ ಬಹಳಷ್ಟು ತುಳುಪದಗಳು ಬಳಕೆಯಾಗಿವೆ. ಇದರಲ್ಲಿ ತುಳು ಭಾಷೆಯ ಉಚ್ಚಾರ, ವ್ಯಾಕರಣ ಮತ್ತು ಪದಗಳ ಬಳಕೆಯಾಗಿವೆ. ಇದನ್ನು ಮಾಪಿಳ್ಳೆ ಭಾಷೆಯ ಉಪಭಾಷೆಯೆನ್ನುವುದಕ್ಕಿಂತ ತುಳು ಭಾಷೆಯ ಉಪಭಾಷೆ ಎನ್ನಬಹುದಾಗಿದೆ[೧೫].

## ಬ್ಯಾರಿ ಭಾಷೆಯ ಕೆಲವು ಲಕ್ಷಣಗಳು

ತುಳುಪದಗಳ ಉಚ್ಚಾರಕ್ಕೂ, ಬ್ಯಾರಿ ಭಾಷೆಗೂ ಸಮೀಪ ಸಂಬಂಧವಿದೆ. ಮಲೆಯಾಳದಲ್ಲಿರುವ ಹಲವಾರು ಮುಖ್ಯ ಉಚ್ಚಾರಗಳೇ ಈ ಭಾಷೆಯಲ್ಲಿಲ್ಲ. ರ, ಟ, ಣ

ಉಚ್ಚಾರಗಳು ಬಹಳಷ್ಟು ಭಿನ್ನವಾಗಿದೆ. 'ಏ' ಉಚ್ಚಾರವೂ 'ಬ' ಆಗಿಯೂ, 'ಆ' 'ಇ' ಆಗಿಯೂ ಬದಲಾವಣೆಗೊಂಡಿದೆ.

ಅರಬಿ ಉಚ್ಚಾರಗಳ ಪ್ರಭಾವ ಕಾಣಿಸಿಕೊಳ್ಳುವಷ್ಟಿದೆ 'ಫ' 'ಜ' ಉಚ್ಚಾರ ಬಳಕೆಗಳಿವೆ. ವ್ಯಾಕರಣದಲ್ಲಿ ಗಮನಾರ್ಹ ವ್ಯತ್ಯಾಸವಿದೆ ಮಲೆಯಾಳದ ವ್ಯಾಕರಣ ವಿಧಾನ ಇದರಲ್ಲಿಲ್ಲ. ಸಂಸ್ಕೃತ ಪದಗಳ ಬಳಕೆ ತೀರಾ ಕಡಿಮೆ. ಮಲೆಯಾಳದಲ್ಲಿ ಶೇಕಡಾ ೯೦ ಕ್ಕಿಂತ ಹೆಚ್ಚು ಸಂಸ್ಕೃತ ಪದಗಳಿವೆ. ಪುರುಷ, ಲಿಂಗ, ವಚನಗಳಲ್ಲಿ ಸ್ಪಷ್ಟವಾದ ವ್ಯತ್ಯಾಸಗಳನ್ನು ಗುರುತಿಸಬಹುದು[೨೬].

ಇದರಲ್ಲಿ ಸೇರ್ಪಡೆಗೊಳ್ಳುವ ವ್ಯತ್ಯಯಾಕ್ಷರಗಳು ಮತ್ತು ಪದಗಳು ತುಳುವಿನಂತಿದೆ. ಉದಾ: ಬಾಲ (ಬಲ–ತು) ಪೋಲ (ಪೋಲ – ತು) ಹೋಗು.

ವ್ಯಾಕರಣವು ಹೊಸ ರೀತಿಯಲ್ಲಿ ಸಂಯೋಜಿಸಲ್ಪಟ್ಟಿದೆ. ಕ್ರಿಯಾಪದವು ವೈವಿಧ್ಯ ಪೂರ್ಣವಾಗಿ ಬಳಸಲ್ಪಡುತ್ತದೆ.

ಉದಾ: ಚೊಲ್ಲ್ಲು (ಹೇಳು)

| **ಬ್ಯಾರಿ ಭಾಷೆ** | : | **ಕನ್ನಡ ಭಾಷೆ** |
|---|---|---|
| 1. ಚೊಲ್ಲ್ಲುರೆ | : | ಹೇಳುತ್ತೇನೆ |
| 2. ಚೊನ್ನೆ | : | ಹೇಳಿದೆ |
| 3. ಚೊಲ್ಲ್ಲುವೆ | : | ಹೇಳುವೆ |
| 4. ಚೊಲ್ಲಾತೆ | : | ಹೇಳಬಹುದಿತ್ತು |
| 5. ಚೊಲ್ಲ್ಲು | : | ಹೇಳು |
| 6. ಚೊಲ್ಲಂಡ | : | ಹೇಳಬೇಡ |
| 7. ಚೊಲ್ಲಾಂತೆ | : | ಹೇಳುತ್ತಿದ್ದೆ |
| 8. ಚೊಲ್ಲ್ಲುರು | : | ಹೇಳಿ |
| 9. ಚೊಲ್ಲ್ಲೊಣು | : | ಹೇಳಬೇಕು. |

ಕೆಲವು ಸರಳ ಉಪಯೋಗಗಳನ್ನು ಗಮನಿಸಬಹುದು

| **ಬ್ಯಾರಿ ಭಾಷೆ** | : | **ತುಳು ಭಾಷೆ** |
|---|---|---|
| ಬೇಣು | : | ಬೋಡು |
| ತೀರು | : | ತೀರು (ಸಾಧ್ಯ) |
| ಬಕ್ಕು | : | ಅಂದ್ |
| ಉಳ್ಳೆ | : | ಉಳ್ಳೆ (ಇದ್ದೇನೆ) |
| ಉಳ್ಳಾರಾ | : | ಉಳ್ಳೇರಾ |

ತುಳುವಿನಲ್ಲಿರುವಂತೆಯೆ ಅನೇಕ ಅನ್ಯಭಾಷಾಪದಗಳು ಬ್ಯಾರಿ ಭಾಷೆಯಲ್ಲಿವೆ ಉದಾ:

| **ಬ್ಯಾರಿ ಭಾಷೆ** | : | **ಕನ್ನಡ ಅರ್ಥ** |
|---|---|---|
| ಅಂದಾಜೆ | : | ಅಂದಾಜು |
| ಅಲಾಕ್ | : | ನಾಶ |
| ಅಜನ | : | ಶಬ್ದ |
| ಅಕಲ್ | : | ಬುದ್ಧಿ |
| ಅಲಾಮು | : | ಹೇಳಿಕೆ |
| ಅಬರ್ | : | ಎಚ್ಚರ |

ಬ್ಯಾರಿ ಭಾಷೆಗೆ ೧೨೦೦ ವರ್ಷಗಳ ಇತಿಹಾಸವಿದ್ದು ದಕ್ಷಿಣ ಭಾರತದ ಕರಾವಳಿಯಲ್ಲಿ ಇಸ್ಲಾಂ ಧರ್ಮ ಪ್ರಚಾರವಾಗುವುದಕ್ಕೆ ಮುನ್ನವೆ ಬ್ಯಾರಿ ಭಾಷೆ ಬಳಕೆಯಲ್ಲಿತ್ತು ಎಂಬುದಕ್ಕೆ ಹಲವು ಆಧಾರಗಳನ್ನು ಇತಿಹಾಸಜ್ಞರು ನೀಡಿದ್ದಾರೆ. ಇಸ್ಲಾಂ ಧರ್ಮ ಇಲ್ಲಿ ಪ್ರಚಾರವಾದದ್ದು ಕ್ರಿ.ಶ. ೫೭೦ರ ನಂತರ ಆದರೆ ಕರಾವಳಿಯುದ್ದಕ್ಕೂ ಅರಬ್ ವ್ಯಾಪಾರಿಗಳ ಸಂಪರ್ಕ

ಕ್ರಿ.ಶ.ದ ಮೊದಲ ಶತಮಾನದಲ್ಲೇ ಇತ್ತೆಂದು ಹಲವು ಸಂಶೋಧಕರು ಹೇಳಿದ್ದಾರೆ[೨೭]. ಅಂದರೆ ಇಸ್ಲಾಂ ಧರ್ಮ ತುಳುನಾಡಿಗೆ ಪ್ರಚಾರಗೊಳ್ಳುವ ಮುನ್ನವೇ ಬ್ಯಾರಿಗಳು ಮತ್ತು ಬ್ಯಾರಿ ಭಾಷೆ ಇತ್ತು. ಬ್ಯಾರಿ ಭಾಷೆಗೆ ಅತ್ಯಂತ ನಿಕಟವಾದ ಭಾಷೆಯೊಂದನ್ನು ಆಡುವ, ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿದ್ದ ಬೋವಿಜನಾಂಗದ ಅಸ್ತಿತ್ವ ಕೂಡಾ ಇದನ್ನು ಸಮರ್ಥಿಸುತ್ತದೆ ಎಂಬುದು ಬಿ.ಎಂ ಹನೀಫ್‌ರವರ ಅಭಿಪ್ರಾಯ[೨೮].

ಫಕೀರ್ ಮಹಮ್ಮದ್ ಕಟ್ಪಾಡಿಯವರು ಬಟ್ಟೆಳ್ತ್ ಅಥವಾ ಬಟ್ಟೆ ಹರಾಫ್ ಎನ್ನುವುದು ಇಸ್ಮನಮೌಲವಿಗಳು, ದೀವ್‌ನ ಮಂತ್ರವಾದಿಗಳು, ಆಯತ್‌ಗಳನ್ನು ಬರೆಯಲು ಉಪಯೋಗಿಸುತ್ತಿದ್ದ ಶಾರ್ಟ್‌ಹ್ಯಾಂಡ್ ಅರಬಿ ಅಕ್ಷರಗಳು ಮಲೆಯಾಳಂ ಭಾಷೆಯ ಅಕ್ಷರಗಳು ಕಷ್ಟಕರವೆನಿಸಿದ, ಇಲ್ಲಿ ನೆಲೆನಿಂತ ಅರಬರು ತಮಗೆ ಅನುಕೂಲವಾಗುವಂತೆ ಅರಬಿ ಮಲೆಯಾಳಂ ಅಕ್ಷರಗಳನ್ನು ಬಳಕೆಯಲ್ಲಿ ತಂದದ್ದು, ಮಾಲೆ, ಸಬೀನ, ಪಾಟ್ಟ್‌ಗಳಲ್ಲಿ ಇದು ಬಳಕೆಯಾದುದು ಇದರ ಹಿಂದಿನ ಇತಿಹಾಸ. ಈ ಬಟ್ಟೆಳ್ತ್‌ಗಳಲ್ಲಿ ಬ್ಯಾರಿಭಾಷೆಯನ್ನು ವೈಯಕ್ತಿಕವಾಗಿ ಬರೆಯಲು ಕೆಲವರು ಪ್ರಯತ್ನ ಮಾಡಿರಬಹುದು. ಇಷ್ಟಕ್ಕೆ ಇದನ್ನು ಬ್ಯಾರಿ ಲಿಪಿ ಎಂದು ಕರೆಯುವುದನ್ನು ಒಪ್ಪಲು ಕಷ್ಟವಾಗುತ್ತದೆ[೨೯].

ಬಿ.ಎಂ ಇಚ್ಲಂಗೋಡುರವರು ಪ್ರಸ್ತಾಪಿಸಿರುವ ಬಟ್ಟೆಳ್ತ್ ಬ್ಯಾರಿ ಲಿಪಿ ಎಂದು ದೃಢಪಟ್ಟ ವಿಚಾರವಲ್ಲ ಬ್ಯಾರಿ ಭಾಷೆಗೆ ಅಕ್ಷರವೇ ಇಲ್ಲದಿದ್ದರೆ ಲಿಪಿ ಎಲ್ಲಿಂದ ಬಂತು? ಈಗ ಬ್ಯಾರಿ ಭಾಷೆಯನ್ನು ಕನ್ನಡದಲ್ಲಿ ಬರೆದ ಹಾಗೆ ಆಗಿನ ಬ್ಯಾರಿಗಳು ಬ್ಯಾರಿಭಾಷೆಯನ್ನು ಅರೇಬಿಕ್ ಭಾಷೆಯಲ್ಲಿ ಬರೆದಿರಬಹುದು. ಆದ್ದರಿಂದ ಅದನ್ನು ಬ್ಯಾರಿ ಲಿಪಿ ಎಂದು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಭಾಷೆಯ ಅಭಿವೃದ್ಧಿಗೆ ಲಿಪಿಯೇ ಅಗತ್ಯವಾದುದ್ದಲ್ಲ ಎಂಬುದು ಅಖಿಲ ಭಾರತ ಬ್ಯಾರಿ ಪರಿಷತ್ತು ಮಂಗಳೂರು ಇದರ ಅಧ್ಯಕ್ಷರಾದ ಬಿ.ಎಂ. ಮಹಮ್ಮದ್ ಹನೀಫ್‌ರವರ ಅಭಿಮತ[೩೦].

ಬ್ಯಾರಿ ಭಾಷೆಗೆ ಲಿಪಿ ಇತ್ತು ಎಂಬ ವಿಚಾರ ಕುತೂಹಲಕಾರಿಯಾಗಿದ್ದು, ಬ್ಯಾರಿ ಭಾಷೆ, ಸಂಸ್ಕೃತಿಗಳ ಬಗ್ಗೆ ಇನ್ನಷ್ಟು ಸಂಶೋಧನೆಗೆ ಹಾಗೂ ಅಧ್ಯಯನಕ್ಕೆ ಪ್ರೇರಕವಾಗಿದೆ ಎಂಬುದು ಅಬ್ದುರ್ರಹಮಾನ್ ಕುತ್ತೆತ್ತೂರರ ಅಭಿಪ್ರಾಯ.

ದಕ್ಷಿಣಕನ್ನಡದ ಬ್ಯಾರಿಗಳಿಗೆ ತಮ್ಮದೇ ಆದ ಭಾಷಿಕ ಹಾಗೂ ಸಾಂಸ್ಕೃತಿಕ ಪರಂಪರೆಯಿದೆ. ನಾಡಿನ ಸಮಸ್ತ ಭಾಷಿಕ, ಧಾರ್ಮಿಕ, ಸಾಂಸ್ಕೃತಿಕ ಪರಂಪರೆಗೆ ಈ ಸಮಾಜ ಸಂಖ್ಯಾ ದೃಷ್ಟಿಯಿಂದ ಚಿಕ್ಕದಾದರೂ ಸಾಕಷ್ಟು ಮಹತ್ತರವಾದ ಕೊಡುಗೆಗಳನ್ನು ಕೊಟ್ಟಿದೆ. ಸಮುದಾಯಿಕ ಭಾಷಿಕ ಹಾಗೂ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಲು ಅವುಗಳನ್ನು ಬೆಳೆಸಿಕೊಂಡು ಹೋಗುವುದು ಪ್ರಜ್ಞಾವಂತ ಬ್ಯಾರಿ ಸಮುದಾಯದ ಮೇಲಿದೆ. ಒಂದು ಭಾಷೆಗೆ ಲಿಪಿ ಇದೆ ಎಂದಾಕ್ಷಣ ಅದರ ಘನತೆ ಗೌರವಗಳು ಹೆಚ್ಚಾಗುವುದಿಲ್ಲ. ಲಿಪಿ ಇಲ್ಲ ಎಂಬುದು ಕೀಳರಿಮೆಗೆ ಕಾರಣವಾಗಬೇಕಾಗಿಲ್ಲ. ಪ್ರಪಂಚದಲ್ಲಿ ಕೆಲವು ಸಾವಿರ ಭಾಷೆಗಳಿವೆ. ಆದರೆ ಸ್ವತಂತ್ರವಾದ ಲಿಪಿಗಳಿರುವುದು ಹತ್ತಿಪ್ಪತ್ತೈದು ಭಾಷೆಗಳಿಗೆ ಮಾತ್ರ. ಬ್ಯಾರಿ ಭಾಷೆಯನ್ನು ಹಿಂದಿನ ಕಾಲದ ಅರಬ್ ಹಾಗೂ ಮಲೆಯಾಳ ಲಿಪಿಯ ಕೆಲವು ಅಕ್ಷರಗಳನ್ನು ಬಳಸಿಕೊಂಡು ತಮ್ಮ ವೈಯಕ್ತಿಕ ದಾಖಲೆಗಳಿಗಾಗಿ ಬಳಸುತ್ತಿದ್ದರು. ಆದರೆ ಈಗ ಅದನ್ನು ಓದುವವರಾಗಲೀ ಬಳಸುವವರಾಗಲೀ ಯಾರಿದ್ದಾರೆಂದು ಹುಡುಕಬೇಕಾಗುತ್ತದೆ. ಅ ಲಿಪಿಯನ್ನು ಅಭಿವೃದ್ಧಿಗೊಳಿಸಿ ಪ್ರಚಾರಕ್ಕೆ ತಂದರೆ ಬಳಸಬಹುದು ಎಂದು ಡಾ. ಉಪಾಧ್ಯಾಯ ದಂಪತಿಗಳು ಹೇಳಿದ್ದಾರೆ[೩೧].

ಭಾಷೆಗಳ ಮಧ್ಯ ಕೊಡುಕೊಳ್ಳುವಿಕೆಯ ನೆಲೆಯಲ್ಲಿ ಚಲನಶೀಲ ಗುಣವುಳ್ಳ ಶಕ್ತಿಶಾಲಿ ಭಾಷೆಯಾಗಿಯೂ ಬ್ಯಾರಿ ಭಾಷೆ ಮಹತ್ವ ಪಡೆದಿದೆ. ಬ್ಯಾರಿ ಸಮುದಾಯದಂತೆಯೇ ಬ್ಯಾರಿ ಭಾಷೆ ಕೂಡಾ ಪರಿಸರದ ಕನ್ನಡ, ತುಳು, ಕೊಂಕಣಿ, ಉರ್ದು, ಮಲಯಾಳಂ ಭಾಷೆಗಳೊಂದಿಗೆ ನಿಕಟಸಂಬಂಧವನ್ನಿಟ್ಟುಕೊಂಡಿದೆ. ಬ್ಯಾರಿ ಭಾಷೆಗೆ ಲಿಪಿ ಇದೆ. ಇಲ್ಲ ಎಂಬ ವಾದ ವಿವಾದವಿದೆ. ಆದರೆ ಅದು ಇಲ್ಲಿ ಮುಖ್ಯವಲ್ಲ. ಯಾಕೆಂದರೆ ಜಗತ್ತನ್ನೆ ಆಳಬಲ್ಲ ಇಂಗ್ಲಿಷ್ ಭಾಷೆಗೆ ಸ್ವಂತ ಲಿಪಿ ಇಲ್ಲ. ಈಗಾಗಲೇ ಡಾ।ಸುಶೀಲಾ ಉಪಾಧ್ಯಾಯರು ಬ್ಯಾರಿ ಭಾಷೆಯ ಸಂಶೋಧನೆ ನಡೆಸಿದ್ದಾರೆ. ಲಿಪಿಯ ಬಗ್ಗೆ ಹೆಚ್ಚಿನ ಸಂಶೋಧನೆಯಾಗಬೇಕಾಗಿದೆ.

ಸಂಶೋಧಕರಾದ ಪ್ರೋ.ಬಿ.ಎಂ ಇಚ್ಲಂಗೋಡು ಡಾ. ವಹಾಬ್ ದೊಡ್ಡಮನೆ, ಅಹ್ಮದ್ ನೂರಿಯವರು 'ಬ್ಯಾರಿ' ಎಂಬ ಶಬ್ದ ತುಳುನಾಡಿನ ಬ್ಯಾರದಿಂದ ಬಂದಿದೆ ಎಂದು ಅಭಿಪ್ರಾಯ ಪಡುತ್ತಾರೆ. ಶತಮಾನದ ಹಿಂದಿನ ಮುಸಲ್ಮಾನರ ಹೆಸರಿನ ಮುಂದೆ ಬ್ಯಾರಿ ಮತ್ತು ಬ್ಯಾರ್ದಿ ಎಂಬ ಪದದ ಬಳಕೆ ಸರಕಾರಿ ಪತ್ರಗಳಲ್ಲಿ ಕಂಡು ಬರುತ್ತದೆ. ಕೇರಳದ ಮಲಪ್ಪುರಂ

ಜಿಲ್ಲೆಯಿಂದ ಉತ್ತರಕ್ಕೆ 'ಮಲಬಾರ್' ಎಂಬ ಹೆಸರಿದೆ. ದಕ್ಷಿಣ ಕನ್ನಡ ಜಿಲ್ಲೆಗೆ ಮಲಬಾರಿನ ಮುಸಲ್ಮಾನರು ವಲಸೆ ಬಂದು ನೆಲಸಿರುವ ಸಾಧ್ಯತೆ ಇದೆ. ಹಾಗೇ ಬಂದ ಮಲಬಾರಿ ಮುಸಲ್ಮಾನರನ್ನು 'ಬ್ಯಾರಿಗಳು' ಎಂದು ತುಳುವರು ಸಂಭೋಧಿಸರಬಹುದೆಂದು ಲೇಖಕ ಸಾಲೆತ್ತೂರು ಅಬುಬಕರ್ ಪೈರ್ಝಿ ಅಭಿಪ್ರಾಯ ಪಡುತ್ತಾರೆ. ಆದರೆ ಬ್ರಿಟಿಷ್ ಕಾಲದಲ್ಲಿ ಕಾಸರಗೋಡು, ಕಣ್ಣೂರು ಇತ್ಯಾದಿ ಪ್ರದೇಶಗಳನ್ನು ಮಲಬಾರು ಪ್ರದೇಶ ಎಂದೇ ಕರೆಯುತ್ತಿದ್ದರು. ಬಹಳ ಹಿಂದಿನಿಂದ ಕಾಸರಗೋಡು ಪ್ರದೇಶದಿಂದ ದಕ್ಷಿಣ ಕನ್ನಡಕ್ಕೆ ವಲಸೆ ಬಂದು ನೆಲೆಸಿದ ಇವರನ್ನೆಲ್ಲರನ್ನು ಉರ್ದು ಮಾತನಾಡುವ ದಖ್ಖನಿಗಳು ಕರೆದದ್ದು 'ಮಲಬಾರಿ'ಗಳೆಂದು ಮಹಾರಾಷ್ಟ್ರದಲ್ಲಿಯೂ ಕರಾವಳಿಯ ಮುಸಲ್ಮಾನರನ್ನು 'ಮಲಬಾರಿ'ಗಳೆಂದು ಕರೆಯುತ್ತಾರೆ. ಈ 'ಮಲಬಾರಿಗಳೇ' ಯಾಕೆ ಬ್ಯಾರಿಗಳಾಗಬಾರದು. ಹಾಗೆಯೇ 'ಬಾರಿ' ಎಂಬುದು ಅಲ್ಲಾಹನ ತೊಂಬತ್ತೊಂಬತ್ತು ಗುಣಗಾನಗಳಲ್ಲಿ ಒಂದು 'ಬಾರಿ' ಎಂದರೆ ಸೃಷ್ಟಿಕರ್ತ ಎಂಬ ಅರ್ಥ ಆದ್ದರಿಂದ ವಾಸಿಂಬಾರಿ, ಜಾಸಿಂ ನೆಬಾರಿ ಎಂಬ ಹೆಸರುಗಳು ಬಾರಿ ಎಂಬ ಅರ್ಥದಿಂದ ಬಂದಿರಬಹುದು. ಹಿಂದಿನ ಕಾಲದಲ್ಲಿ ಬ್ಯಾರಿ ಮತ್ತು ಬ್ಯಾರ್ದಿ ಎಂಬ ಪದವು ಸಮುದಾಯಕ್ಕೋಸ್ಕರ ಬಳಸಿರಲಿಕ್ಕಿಲ್ಲ. ಈ ಪದಗಳನ್ನು ಅವರ ಅಸ್ತಿತ್ವವನ್ನು ತಿಳಿಸಲಿಕ್ಕೋಸ್ಕರ ಉಪಯೋಗಿಸಿರಬಹುದು. ಈಗ ಬ್ಯಾರಿ ಸಮುದಾಯದವರು 'ಬ್ಯಾರಿ' ಎಂಬ ಪದವನ್ನು ಹೆಮ್ಮೆಯಿಂದ ಬಳಸುತ್ತಿದ್ದಾರೆ. ಆದರೆ ಹಿಂದೆ 'ಬ್ಯಾರಿ' ಪದ ಅವಮಾನಕರವೆಂದು ಹೇಳುತ್ತಿದ್ದರು. ಯಾಕೆಂದರೆ ಈಗಲೂ ಈ ಸಮುದಾಯದ ಹಿರಿಯರು ಬ್ಯಾರಿ ಎಂಬ ಪದ ಅಡ್ಡನಾಮವಾಗಿ ಇತರ ಸಮುದಾಯದವರು ಕರೆಯುತ್ತಿದ್ದರು. ಆದುದರಿಂದ ನಾವು ಬ್ಯಾರಿಗಳಲ್ಲ, ಮುಸಲ್ಮಾನರು ಎನ್ನುವುದನ್ನು ಸಂದರ್ಶನದ ಸಮಯ ಹಲವರ ಅಭಿಪ್ರಾಯವಾಗಿದೆ. 'ಬ್ಯಾರಿ' ಎಂಬ ಪದವು ಬ್ಯಾರಿ ಭಾಷೆಯನ್ನು ಆಡುವವರಿಗೆ ಮಾತ್ರ ಇಡಲಾಗಿದೆ ಉರ್ದು ಮಾತನಾಡುವ ಮುಸಲ್ಮಾನರಿಗೆ ಬ್ಯಾರಿಗಳೆಂದು ಕರೆಯುವುದಿಲ್ಲ. 'ಬ್ಯಾರಿ' ಎಂಬ ಪದದಿಂದ ಬ್ಯಾರಿ ಸಮುದಾಯವನ್ನು ಗುರುತಿಸುವುದು ಸಮಂಜಸವಲ್ಲ.

ಜಿಲ್ಲೆಯ ದಖ್ಖನಿಗಳನ್ನು ಯಾಕೆ ಬ್ಯಾರಿ ಎಂದು ಗುರುತಿಸಲಾಗುತ್ತಿಲ್ಲ. ಬ್ಯಾರಿ ಎಂಬುದು ಯಾರನ್ನು ಯಾವ ಆಧಾರದ ಮೇಲೆ ಗುರುತಿಸಿಕೊಳ್ಳಬೇಕು ಎಂಬುದು ನಿಗೂಢವಾಗಿಧೆ. ಕರಾವಳಿಯುದ್ದಕ್ಕೂ ಬ್ಯಾರಿಗಳು ವ್ಯಾಪಾರಮಾಡುತ್ತಿದ್ದುದರಿಂದ ತುಳುನಾಡಿನ ಜನರು ಅವರನ್ನು ಬ್ಯಾರಿಗಳೆಂದು ಕರೆದರು. ಬ್ಯಾರಿ ಪದ 'ಬ್ಯಾರ'ದಿಂದ ಬಂದಂತಹದು ಎಂದು ಹಲವಾರು ಜನರು ತಮ್ಮ ಅಭಿಪ್ರಾಯಕೊಟ್ಟಿದ್ದಾರೆ. ಹಾಗಾದರೆ ಬ್ಯಾರ ಮಾಡುವವನೇ ಬ್ಯಾರಿ ಎಂದಾದರೆ ಬ್ಯಾರ ಮಾಡುವ ಕೊಂಕಣಿಗಳು, ಶೆಟ್ಟಿಗಳು ಯಾಕೆ ಬ್ಯಾರಿಗಳಾಗಲಿಲ್ಲ? ಉರ್ದು ಮಾತನಾಡುವ ಮುಸಲ್ಮಾನರು ಯಾಕೆ ಬ್ಯಾರಿಗಳಲ್ಲ, ಆದುದರಿಂದ 'ಬ್ಯಾರ' ಮಾಡುವವರೇ ಬ್ಯಾರಿಗಳೆಂದು ವ್ಯಾಖ್ಯಾನಿಸುವುದು ತಪ್ಪು. ಪ್ರೋ. ಬಿ.ಎಂ. ಇಚ್ಲಂಗೋಡುರವರು ಬ್ಯಾರಿ ಭಾಷೆಗೆ ಲಿಪಿ ಇತ್ತು ಎಂಬ ವಿಚಾರ ಪ್ರಸ್ತಾಪಿಸಿದ್ದಾರೆ. ಆದರೆ ಅರಬರು ಕರಾವಳಿಯಲ್ಲಿ ನೆಲೆನಿಂತ ಕಾರಣ, ಅವರು ತಮ್ಮ ವ್ಯವಹಾರಕ್ಕೋಸ್ಕರ ಅರಬಿ ಲಿಪಿಯನ್ನು ಬಳಸುತ್ತಿದ್ದರು. ಕೆಲವು ಬ್ಯಾರಿಗಳು ಈ ಅರಬಿ ಲಿಪಿಯನ್ನು ಕಲಿತಿರಬಹುದು ಯಾಕೆಂದರೆ ಬ್ಯಾರಿಗಳು ಓದುವ ಕುರಾನ್ ಬ್ಯಾರಿ ಭಾಷೆಯಲ್ಲಿರದೆ, ಅರಬಿ ಲಿಪಿಯನ್ನು ಬ್ಯಾರಿಗಳು ಬಿಡಲಿಲ್ಲ. ಆದುದರಿಂದ ಅವರು ಬಳಸುತ್ತಿದ್ದ ಲಿಪಿಯನ್ನು ಪ್ರೋ.ಬಿ.ಎಂ. ಇಚ್ಲಂಗೋಡುರವರು ಬ್ಯಾರಿ ಲಿಪಿ ಎಂದಿದ್ದಾರೆ. ಬ್ಯಾರಿಗಳು ಈಗಲೂ ಎಲ್ಲಾ ವಿಚಾರಗಳಿಗೆ ಅರಬಿ ಲಿಪಿ, ಕ್ರಮ, ಪದ್ಧತಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿದಾಗ, ಇದು ಬ್ಯಾರಿ ಲಿಪಿಯಾಗಲು ಸಾಧ್ಯವಿಲ್ಲ ಎಂಬುದು ನನ್ನ ಅಭಿಮತ.

## ಅಡಿ ಟಿಪ್ಪಣಿ

೧. ಇಚ್ಲಂಗೋಡು ಬಿ. ಎಂ., ೨೦೦೦
ಪೊಲಿ, ಆಪ್‌ಸೆಟ್ ಪ್ರಿಂಟರ್ಸ್, ಮಂಗಳೂರು

೨. ಡಾ.ವಹಾಬ್ ದೊಡ್ಡ, ೧೯೯೩
ಮುಸ್ಲಿಂಮ್ಸ್ ಇನ್ ದಕ್ಷಿಣ ಕನ್ನಡ, ಗ್ರೀಡ್‌ವರ್ಡ್ಸ್ ಪಬ್ಲಿಕೇಷನ್, ಮಂಗಳೂರು

೩. ಹಂಝುಮಲಾರ್, ೨೦೦೧
ಬ್ಯಾರಿ ಮುಸ್ಲಿಮರು, ಮದುರ ಪ್ರಕಾಶನ, ಮಂಗಳೂರು

೪. ಇಚ್ಲಂಗೋಡು ಬಿ. ಎಂ., ೧೯೯೭
ತುಳುನಾಡ ಮುಸ್ಲಿಮರು, ಬ್ಯಾರಿ ಪ್ರಕಾಶನ, ಬೆಂಗಳೂರು

೫. ಹಂಝುಮಲಾರ್, ನವೆಂಬರ್, ೨೦೦೫
ಹೊಸತು, ಬ್ಯಾರಿ ಮುಸ್ಲಿಮರು ಬಂದು ಪರಿಚಯ

೬. ಹಂಝುಮಲಾರ್ ಬರವಣಿಗೆ ೨೦೦೪
ಬ್ಯಾರಿ ಭಾಷೆಯ ಉಗಮ ಮತ್ತು ವೈವಿಧ್ಯತೆ

೭. ಇಚ್ಲಂಗೋಡು ಬಿ.ಎಂ., ೧೯೯೭
ತುಳುನಾಡ ಮುಸ್ಲಿಮರು, ಬ್ಯಾರಿ ಪ್ರಕಾಶನ, ಬೆಂಗಳೂರು

೮. ಇಚ್ಲಂಗೋಡು ಬಿ.ಎಂ.
ಸಂಶೋಧನಾ ಕೃತಿ

೯. ಸಲಾವುದ್ದೀನ್ ಬಿ.ಎಂ., ೨೩.೪.೦೮
ಮೌಖಿಕ ಭೇಟಿ, ಕಂಕನಾಡಿ, ಎಪ್ಪತ್ತುವರ್ಷ

೧೦. ಅಬ್ದುಲ್ ರಹಮಾನ್ ಎಂ.ಬಿ., ೨೩.೪.೦೮
ಮೌಖಿಕ ಭೇಟಿ, ನ್ಯಾಯವಾದಿ, ಮಂಗಳೂರು

೧೧. ಇಚ್ಲಂಗೋಡು ಬಿ.ಎಂ., ೧೯೯೭
ಬ್ಯಾರಿ ಬೆಳೆದು ಬಂದ ದಾರಿ, ಬ್ಯಾರಿ ಪ್ರಕಾಶನ, ಬೆಂಗಳೂರು

೧೨. ಗಜೆಟಿಯರ್ ಆಫ್ ಇಂಡಿಯಾ, ೧೯೭೩

ದಕ್ಷಿಣ ಕನ್ನಡ ಜಿಲ್ಲೆ ಪುಟ ೧೦೪

೧೩. ಎಡ್ವರ್ಡ್ ತರ್ಸ್ಟನ್
ಕಾಸ್ಟ್ಮೊ ಅಂಡ್ ಟ್ರೆಬ್ಸ್ ಆಫ್ ಸದನ್‌ಇಂಡಿಯಾ

೧೪. ಗಜೆಟಿಯರ್ ಆಫ್ ಇಂಡಿಯಾ ೧೯೭೩

ಕರ್ನಾಟಕರಾಜ್ಯ ದಕ್ಷಿಣ ಕನ್ನಡ ಜಿಲ್ಲೆ ಪುಟ – ೧೦೪

೧೫. ಇಚ್ಲಂಗೋಡು ಬಿ.ಎಂ., ೧೯೯೭
ತುಳುನಾಡ ಮುಸ್ಲಿಮರು, ಬ್ಯಾರಿಪ್ರಕಾಶನ, ಮಂಗಳೂರು

೧೬. ಹಂರ್ಝುಮಲಾರ್, ನವೆಂಬರ್ ೨೦೦೪
ಹೊಸತು, ಬ್ಯಾರಿ ಮುಸ್ಲಿಮರು

೧೭. ಬಿ.ಎ. ಹನೀಫ್ ೨೨.೫.೦೮
ಮೌಖಿಕ ಭೇಟಿ, ಅಧ್ಯಕ್ಷರು ಅಖಿಲ ಭಾರತ ಬ್ಯಾರಿ ಪರಿಷತ್ತು, ಮಂಗಳೂರು

೧೮. ಇಚ್ಲಂಗೋಡು ಬಿ.ಎಂ. ೨೦೦೭
ತುಳು ಸಾಹಿತ್ಯ ಚರಿತ್ರೆ, ಹಂಪಿ ಪ್ರಕಾಶನ

೧೯. ಇಚ್ಲಂಗೋಡು ಬಿ.ಎಂ. ೨೦೦೭
ತುಳು ಸಾಹಿತ್ಯ ಚರಿತ್ರೆ, ಹಂಪಿ ಪ್ರಕಾಶನ

೨೦. ಹಂರ್ಝುಮಲಾರ್, ನವೆಂಬರ್ ೨೦೦೪
ಹೊಸತು ಬ್ಯಾರಿಮುಸ್ಲಿಮರು

೨೧. ಜಹಿರುದ್ದೀನ್, 22.5.08
ಮೌಖಿಕ ಭೇಟಿ, ಕಂಕನಾಡಿ, ಅರವತ್ತು ವರ್ಷ

೨೨. ಹಂರ್ಝುಮಲಾರ್, ನವೆಂಬರ್, ೨೦೦೪
ಹೊಸತು, ಬ್ಯಾರಿ ಮುಸ್ಲಿಮರು

೨೩. ಹಂರ್ಝುಮಲಾರ್ ನವೆಂಬರ್ ೨೦೦೪
ಹೊಸತು, ಬ್ಯಾರಿ ಮುಸ್ಲಿಮರು,

೨೪. ಇಚ್ಲಂಗೋಡು ಬಿ.ಎಂ., ನವೆಂಬರ್ ೨೦೦೭

ಬ್ಯಾರಿ ಟೈಮ್ಸ್, ಬ್ಯಾರಿ ಲಿಪಿ ಸಂಶೋಧನೆಯಾಗಬೇಕು

೨೫. ಡಾ.ಸುಶೀಲಾ ಉಪಾಧ್ಯಾಯ, ೧೯೯೭
ಬ್ಯಾರಿ ಭಾಷೆ ಮತ್ತು ಜನಪದ ಕಥೆಗಳು, ಬ್ಯಾರಿಪ್ರಕಾಶನ, ಬೆಂಗಳೂರು

೨೬. ಇಚ್ಲಂಗೋಡು ಬಿ .ಎಂ., ೨೦೦೭
ತುಳು ಸಾಹಿತ್ಯ ಚರಿತ್ರೆ, ಹಂಪಿ ಪ್ರಕಾಶನ

೨೭. ಡಾ.ವಹಾಬ್ ದೊಡ್ಡಮನೆ, ಅಕ್ಟೋಬರ್ ೨೦೦೭
ಬ್ಯಾರಿ ಟೈಮ್ಸ್

೨೮. ಹನೀಪ್ ಬಿ.ಎ., ನವೆಂಬರ್ ೧೯೯೮
ಬ್ಯಾರಿನ್ಯೂಸ್

೨೯. ಫಕೀರ್ ಮುಹಮ್ಮದ್ ಕಟ್ಪಾಡಿ, ಅಕ್ಟೋಬರ್ ೨೦೦೭
ಬ್ಯಾರಿ ಟೈಮ್ಸ್

೩೦. ಮೊಹಮ್ಮದ್ ಹನೀಫ್ ಬಿ. ಎ., ಡಿಸೆಂಬರ್ ೨೦೦೭
ಬ್ಯಾರಿ ಟೈಮ್ಸ್

# ಅಧ್ಯಾಯ ಮೂರು

# ಹಬ್ಬಗಳು ಮತ್ತು ಧಾರ್ಮಿಕ ಆಚರಣೆಗಳು

೩.೬ ಹಬ್ಬಗಳು

೩.೭ ಮದುವೆ ಮತ್ತು ಇತರ ಸಂಭ್ರಮಗಳು

೩.೮ ಉರೂಸ್

೩.೯ ಮೂಢನಂಬಿಕೆಗಳು

೩.೧೦ ಜನರ ಪ್ರತಿಕ್ರಿಯೆ/ಸ್ಪಂದನ

# ಅಧ್ಯಾಯ ಮೂರು

# ಹಬ್ಬಗಳು ಮತ್ತು ಧಾರ್ಮಿಕ ಆಚರಣೆಗಳು

## ೩.೧. ಹಬ್ಬಗಳು

ಹಬ್ಬಗಳ ಪರಂಪರೆ ಮತ್ತು ಇತಿಹಾಸವು ಅದು ಆರಂಭವಾದಾಗಿನಿಂದಲೇ ದೊರೆಯುತ್ತದೆ. ಆಯಾಕಾಲದಲ್ಲಿ ಆಯಾ ಜನಾಂಗಕ್ಕೆ ಆಯಾ ಪ್ರದೇಶಗಳಲ್ಲಿ ವಿಶಿಷ್ಟವಾದ ಹಬ್ಬಗಳಿವೆ. ಪ್ರತಿಯೊಂದು ಜನಾಂಗ ಅಥವಾ ಸಮುದಾಯದ ಹಬ್ಬಗಳು ಅದರ ಸಂಸ್ಕೃತಿ, ಇತಿಹಾಸ ಹಾಗೂ ಪರಂಪರೆಯನ್ನು ಬಿಂಬಿಸುತ್ತದೆ. ಕೆಲವು ಹಬ್ಬಗಳು ವ್ಯಕ್ತಿ ಪೂಜೆಗಳಾದರೆ, ಕೆಲವು ಆಯಾ ಧರ್ಮದ ಐತಿಹಾಸಿಕ ಘಟನೆಗಳನ್ನು ಸ್ಮರಿಸುತ್ತದೆ. ಇನ್ನು ಕೆಲವು ಹಬ್ಬಗಳು ದೇವರ ಕೋಪ ತಾಪಗಳನ್ನು ತಣಿಸಲಿಕ್ಕಾಗಿದೆ. ಹಬ್ಬಗಳು ಹಲವು ಬಗೆಯದಾದರೂ ವ್ಯಕ್ತಿಯ ಮನಸ್ಸಿಗೆ ಉಲ್ಲಾಸವನ್ನು ಕೊಡುವುದು ನಿಸ್ಸಂಶಯ. ಹಬ್ಬಗಳ ಆಚರಣಾ ವಿಧಿಗಳು ಆಯಾ ಧರ್ಮದ ತಿರುಳು ಹಾಗೂ ಸ್ಫೂರ್ತಿಯನ್ನು ಬಿಂಬಿಸುತ್ತದೆ. ಆದರೆ ಮುಸಲ್ಮಾನರ ಹಬ್ಬಗಳಿಗೆ ಕೇವಲ ಭೋಜನ ಮನರಂಜನೆಗಾಗಿರದೆ, ಆತ್ಮವಲೋಕನದ ಸಂಧರ್ಭಗಳಾಗಿವೆ. ಶ್ರೀಮಂತರು ಬಡವರಿಗೆ ಕಡ್ಡಾಯವಾಗಿ ನೆರವಾಗುವ, ತನ್ಮೂಲಕ ಸಮಾಜದ ಸರ್ವ ವರ್ಗಗಳಲ್ಲೂ ಸಂತೋಷವನ್ನು ಹರಡುವ ದಿನಗಳಾಗಿವೆ. ಅತ್ಯಂತ ಮುಖ್ಯವಾಗಿ ಸೃಷ್ಟಿಕರ್ತನಾದ ಅಲ್ಲಾಹನನ್ನು ಸಾಮೂಹಿಕವಾಗಿ ಸುತ್ತಿಸಿ, ಆತನ ಅಪಾರ ಅನುಗ್ರಹಗಳಿಗೆ ಕೃತಜ್ಞತೆಯನ್ನು ಸಲ್ಲಿಸುವುದಾಗಿದೆ. ಮುಸ್ಲಿಮರ ಹಬ್ಬಗಳು ತಿಂದುಂಡು, ಮೆರೆದಾಡಿ, ಲೌಕಿಕ ಸುಖದ, ಪರಾಕಾಷ್ಠೆಯನ್ನು ತಲುಪುವುದನ್ನು ಕಲಿಸದೆ, ತನ್ನಲ್ಲಿದ್ದುದನ್ನು ಇತರರಿಗೂ, ಹಂಚಿ, ಸರ್ವರೂ ಸೇರಿ ಅಲ್ಲಾಹನನ್ನು ಸುತ್ತಿಸುವುದನ್ನು ಕಲಿಸುತ್ತದೆ[೧].

ಮುಸ್ಲಿಮರ ಹಬ್ಬಗಳು ಪ್ರಪಂಚದಾದ್ಯಂತ ಆಚರಿಸಲಾಗುತ್ತದೆ. ಆದರೆ ಹಬ್ಬಗಳ ಆಚರಣೆಯ ವಿಧಾನ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗಿರತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯ ಆಚರಿಸುವ ಹಬ್ಬಗಳು. ಈ ಕೆಳಗಿನವುಗಳು:

ಮೊಹರ್ರಮ್, ಮಿಲಾದುನ್ನಬಿ, ಶಬೆಬರಾತ್, ಈದುಲ್‌ಫಿತ್ರ್, ಶಬೆಮಿಅರಾಜ್, ಈದುಲ್ ಅಝ್‌ಹಾ.

## ಮೊಹರ್ರಮ್

ಮೊಹರ್ರಮ್ ತಿಂಗಳು ಇಸ್ಲಾಮಿ ಕ್ಯಾಲೆಂಡರ್‌ನ ಪ್ರಥಮ ತಿಂಗಳು. ಈ ತಿಂಗಳ ೧ ರಿಂದ ೧೦ ನೇ ತಾರೀಕಿನವರೆಗೆ ಈ ಹಬ್ಬವನ್ನು ಆಚರಿಸುವುದು ಕಂಡು ಬರುತ್ತದೆ. ಬಿಜಾಪುರ ಶಾ ಸುಲ್ತಾನನ ಆಳ್ವಿಕೆಯ ಸಮಯದಲ್ಲಿ ಶಿಯಾ ಸುಲ್ತಾನರು ಈ ಹಬ್ಬವನ್ನು ದಕ್ಷಿಣ ಭಾರತದಲ್ಲಿ ಪ್ರಸಿದ್ಧಗೊಳಿಸಿದರು. ಮೊಹರ್ರಮ್ ತಿಂಗಳ ೧೦ ನೇ ದಿನದಂದು ಇರಾಕ್ ದೇಶದ ಮೈದಾನದಲ್ಲಿ ನಡೆದ ಯುದ್ಧದ ಸಮಯ ಹ.ಇಮಾಮ್ ಹುಸೈನ್ ಮತ್ತು ಅವರ ಪರಿವಾರವನ್ನು ಮುತ್ತಿಗೆ ಹಾಕಿದ ಯಝೀದ್‌ನ ಭಾರಿ ಸೈನ್ಯವು ಅವರ ಅನ್ನಾಹಾರವನ್ನು ತಡೆಯಿತು ಹ.ಇಮಾಮ್ ಹುಸೈನ್ ಮತ್ತು ಅವರ ಪರಿವಾರದ ಸ್ತ್ರೀಪುರುಷರೆಲ್ಲರೂ ವೀರಾವೇಶದಿಂದ ಹೋರಾಡಿ ವೀರ ಮರಣವನ್ನು ಹೊಂದಿದರು. ಈ ಹಬ್ಬವು ಇಮಾಮ್ ಹುಸೈನ್‌ರ ಹುತಾತ್ಮತೆಯ ಐತಿಹಾಸಿಕ ಹಿನ್ನೆಲೆ. ಈ ದಿನವನ್ನು "ಯೌಮುಲ್ ಅಶೂರಾ" ಎಂದು ಕರೆಯಲಾಗುತ್ತದೆ. 'ಅಶೂರಾ ಎಂಬ ಪದವು. 'ಅಶರದಿಂದ ಹೊರಟಿದೆ. 'ಅಶರ ಎಂದರೆ ೧೦ ಎಂದರ್ಥ ಆದ್ದರಿಂದ ಮೊಹರ್ರಮ್ ೧೦ನೇ ತಾರೀಕನ್ನು 'ಯೌಮುಲ್' ಅಶೂರಾ ಎಂದು ಕರೆಯಲಾಗುತ್ತದೆ[೨].

ಮೊಹರ್ರಮ್ ೧ ನೇ ತಾರೀಕಿನಂದು ಕರ್‌ಬಲಾ ಮೈದಾನದಲ್ಲಿ ಅಗ್ನಿ ಕುಂಡ ಮಾಡಿ, ಹತ್ತು ದಿನಗಳವರೆಗೆ ಉರಿಯಲು ಬಿಡುತ್ತಾರೆ.ಜನರು ಇದನ್ನು ಪ್ರವಿತ್ರವಾದ ಅಗ್ನಿಕುಂಡವೆಂದು ನಂಬುತ್ತಾರೆ. ಉರಿಯುವ ಕೆಂಡದಲ್ಲಿ ಹರಕೆ ಹೊತ್ತವರು ನಡೆದುಕೊಂಡು ಹೋಗುವ ಪದ್ಧತಿಯಿದೆ. ಅಗ್ನಿಕುಂಡದ ಪ್ರತಿಯೊಂದು ಮೂಲೆಯಲ್ಲಿಯೂ ಪಂಜವನ್ನು ನಿಲ್ಲಿಸುತ್ತಾರೆ. ಮೊಹರ್ರಮ್ ೧೦ ನೇ ತಾರೀಕಿನಂದು ಮೆರವಣಿಗೆಗಳನ್ನು ಸಂಘಟಿಸಲಾಗುತ್ತದೆ[೩]. ದುಃಖ ಹಾಗೂ ಶೋಕ ಸೂಚಕವಾಗಿ ಹರಿತವಾದ ಬ್ಲೇಡ್, ಚಿಕ್ಕ ಕತ್ತಿ ಇತ್ಯಾದಿಗಳಿಂದ ತಮ್ಮ ಬೆನ್ನು

ಹಾಗೂ ಎದೆಗಳ ಮೇಲೆ ಗಾಯಮಾಡಿಕೊಳ್ಳುತ್ತಾ ಸಾಗುತ್ತಾರೆ. ಹುತಾತ್ಮರು ಅನುಭವಿಸಿದ ಕಷ್ಟವನ್ನು ತೋರಿಸಲು ಈ ರೀತಿ ರಕ್ತ ಹರಿಸಲಾಗುತ್ತದೆ. ದುಃಖದ ಸಂದರ್ಭವಾದ್ದರಿಂದ ಜೋರಾಗಿ 'ಯಾ ಹುಸೈನ್'ಎಂದು ಅಳುತ್ತಾ ಸಾಗುತ್ತಿರುತ್ತಾರೆ. ಈ ಸಮಯದಲ್ಲಿ ಕೆಲವು ಪ್ರದೇಶಗಳಲ್ಲಿ ಮೆರವಣಿಗೆಯೊಂದಿಗೆ ಹುಲಿವೇಷಗಳನ್ನು ಧರಿಸಿ ಕುಣಿಯುತ್ತಾರೆ.

ಕರ್‌ಬಲಾ ಮೈದಾನವು ಮಂಗಳೂರು, ಮುಲ್ಕಿ, ಕಾರ್ಕಳ ಮುಂತಾದ ಕಡೆಯಲ್ಲಿದೆ. ಆದರೆ ಮಂಗಳೂರಿನಲ್ಲಿ ಬ್ಯಾರಿ ಸಮುದಾಯ ಇತ್ತೀಚೆಗೆ ಈ ರೀತಿಯ ಆಚರಣೆ ಮಾಡುವುದಿಲ್ಲ. ಶಿಯಾ ಪಂಗಡದವರು ಮಾತ್ರ ಈ ರೀತಿ ಆಚರಣೆ ಮಾಡುತ್ತಾರೆ".

## ಮಿಲಾದುನ್ನಬಿ

ಸಾಮಾನ್ಯವಾಗಿ 'ಈದ್ ಮಿಲಾದುನ್ನಬಿ' ಎಂದರೆ ಪ್ರವಾದಿ ಮಹಮ್ಮದರ ಜನ್ಮದಿನಾಚರಣೆ ಅನೇಕ ಮುಸಲ್ಮಾನರು ಇಸ್ಲಾಂ ಚಂದ್ರಮಾನ ಕ್ಯಾಲೆಂಡರ್‌ನ 'ರಬೀವುಲ್ ಅವ್ವಲ್' ತಿಂಗಳು ೧೨ನೇ ತಾರೀಕಿನಂದು ಪ್ರವಾದಿ ಮುಹಮ್ಮದರ(ಸ) ಜನ್ಮ ದಿನಾಚರಣೆಯನ್ನು ಆಚರಿಸುತ್ತಾರೆಂಬುದು ವಾಸ್ತವವಾಗಿದೆ". 'ಈದ್ ಮಿಲಾದುನ್ನಬಿ'ಯ ದಿನದಂದು ಬೆಳಿಗ್ಗೆಯ ಸಮಯದಲ್ಲಿ ದೊಡ್ಡ ಮೆರವಣಿಗೆಯನ್ನು ಸಂಘಟಿಸಲಾಗುತ್ತದೆ. ಮೆರವಣಿಗೆಯ ಹಾದಿಯನ್ನು ಹಸಿರು ಕಾಗದ, ಕಮಾನು ಇತ್ಯಾದಿಗಳಿಂದ ಸಿಂಗರಿಸಲಾಗುತ್ತದೆ. ನಗರದ ಬೀದಿ ಬೀದಿಗಳನ್ನು ಸಾಯಂಕಾಲದ ಸಮಯದಲ್ಲಿ ವಿದ್ಯುತ್ ದೀಪಗಳಿಂದ ಅಲಂಕರಿಸಲಾಗುತ್ತದೆ. ಮೆರವಣಿಗೆಕಾರರು ಪ್ರವಾದಿ ಪ್ರೇಮದ ಘೋಷಣೆಗಳನ್ನು ಕೂಗುತ್ತ ನಗರದ ಮುಖ್ಯ ಬೀದಿಗಳಲ್ಲಿ ಸಾಗುತ್ತಾರೆ. ಮಸೀದಿ ಅಥವಾ ಇನ್ನಿತರ ಕಡೆ ಸಾಯಂಕಾಲ ನಡೆಯುವ ಸಾಮೂಹಿಕ ಉಪನ್ಯಾಸಗಳಲ್ಲಿ ಧಾರ್ಮಿಕ ವಿದ್ವಾಂಸರು, ನಾಯಕರು ಪ್ರವಾದಿ ಮುಹಮ್ಮದರ (ಸ) ಜೀವನದ ಕುರಿತು ಉಪನ್ಯಾಸಗಳನ್ನು ನೀಡುತ್ತಾರೆ. ಇಂತಹ ಉಪನ್ಯಾಸಗಳಲ್ಲಿ ಅವರ ಹುಟ್ಟು, ಅನಾಥ ಬಾಲ್ಯ, ಸ್ವಾತಿಕ ಯೌವನ, ಪ್ರಬುದ್ಧ ಪರಿಪೂರ್ಣ ಜೀವನ, ಅವರ ಸನ್ನಡತೆ, ಉಪದೇಶಗಳು, ಬವಣೆಗಳು, ಶತ್ರುಗಳನ್ನೂ ಕ್ಷಮಿಸುವ ಜಾದಾರ್ಯ

ಗುಣ, ಕಠಿಣ ವಿರೋಧಗಳ ನಡುವೆ ಸ್ಥಿರಚಿತ್ತತೆ, ಯುದ್ಧಗಳಲ್ಲಿ ಮುಂದಾಳತ್ವ, ಜಾಣ್ಮೆ, ಗುಲಾಮ ವಿಮೋಚನೆಯ ಮೇಲ್ಪಂಕ್ತಿ ಇತ್ಯಾದಿ ಗುಣಗಳನ್ನು ಸವಿಸ್ತಾರವಾಗಿ ವಿವರಿಸಿ ಅವುಗಳ ಅನುಸರಣೆಗಾಗಿ ಪ್ರೇರೇಪಿಸಲಾಗುತ್ತದೆ[೬].

ಬಹಳಷ್ಟು ಸಂಖ್ಯೆಯ ಮುಸಲ್ಮಾನರು ಜನ್ಮದಿನಾಚರಣೆಗಳನ್ನಾಗಲೀ ಅಥವಾ ವಾರ್ಷಿಕ ಪುಣ್ಯಸ್ಮರಣೆಗಳನ್ನಾಗಲೀ ಆಚರಿಸುವುದರಲ್ಲಿ ನಂಬಿಕೆ ಇಡುವುದಿಲ್ಲ.ಏಕೆಂದರೆ ಪ್ರವಾದಿ ಮುಹಮ್ಮದರು (ಸ) ತಮ್ಮ ಜೀವಿತಾವಧಿಯಲ್ಲಿ ಆಚರಿಸಿದ ಬಗ್ಗೆ ಇತಿಹಾಸದಲ್ಲಿ ಉಲ್ಲೇಖವಿಲ್ಲ.

## ಶಬೆ ಬರಾತ್

'ಶಅಬಾನ್' ತಿಂಗಳ ೧೪ನೇಯ ತಾರೀಕಿನಂದೆ 'ಶಬೆಬರಾತ್' ಅನ್ನು ಆಚರಿಸುವುದು ರೂಢಿಯಲ್ಲಿದೆ. ಅಲ್ಲಾಹು ಪ್ರತಿಯೊಬ್ಬನಿಗೂ ಬೇಕಾದಷ್ಟು ಆಹಾರವನ್ನು ಪ್ರತೀ .ವರ್ಷ ಒದಗಿಸುತ್ತಾನೆ. ಅ ದಿನ ರಾತ್ರಿ ಸಂಭ್ರಮ ಪ್ರಾರಂಭವಾಗುವುದು, ಪ್ರತಿಯೊಬ್ಬ ಮುಸ್ಲಿಂನು ಕುರಾನಿನ ಯಾಸೀನ್ ಅಧ್ಯಾಯ ಓದಿ, ಫಾತಿಯಾ ಮತ್ತು ದುವಾ ದೇವರಿಗೆ ಮಾಡಿ, ತನ್ನ ಜೀವನದುದ್ದಕ್ಕೂ ಬೇಕಾದಷ್ಟು ಆಹಾರ, ಮತ್ತು ಹೆಂಡತಿ ಮಕ್ಕಳನ್ನು ನೋಡುವ ಸಾಮರ್ಥ್ಯ ಕೊಡಲು ಬೇಡಿಕೊಳ್ಳುತ್ತಾನೆ. ಆ ರಾತ್ರಿ ಸ್ಮಶಾನಕ್ಕೆ ಹೋಗಿ ತನ್ನ ತಂದೆ ತಾಯಿಯರ ಮತ್ತು ಸಂಬಂಧಿಕರ ಸಮಾಧಿಯನ್ನು ನೋಡಿ, ಅವರನ್ನು ಜ್ಞಾಪಿಸಿಕೊಳ್ಳುತ್ತಾರೆ (ನೆನಪಿಸಿ ಕೊಳ್ಳುತ್ತಾರೆ). ಈ ಹಬ್ಬವನ್ನು ಮಸೀದಿಯಲ್ಲಿ ಸಮುದಾಯದವರು ಸೇರಿ ಆಚರಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಸಮುದಾಯವು ಪವಿತ್ರ ದಿನವೆಂದು ನಂಬಿ ಈ ಹಬ್ಬವನ್ನು ಭಕ್ತಿ ಪೂರ್ವವಾಗಿ ಆಚರಣೆ ಮಾಡುತ್ತಾರೆ[೭].

## ಈದುಲ್ ಫಿತ್ರ್

ಒಂದು ತಿಂಗಳ ಸತತ ಉಪವಾಸದ ನಂತರ 'ಶವ್ವಾಲ್' ತಿಂಗಳ ೧ನೇ ತಾರೀಕಿನಂದು ಆಚರಿಸಲಾಗುವ ಹಬ್ಬವಿದು. ಪ್ರಪಂಚದಲ್ಲೇ ಈ ಹಬ್ಬವನ್ನು ಆಚರಿಸಲಾಗುವುದು. ಉಪವಾಸಕ್ಕೆ

ಅರಬಿ ಭಾಷೆಯಲ್ಲಿ 'ಸೌಮ್'ಎಂದು ಹೇಳುತ್ತಾರೆ. ಅದಕ್ಕೆ 'ತಡೆಹಿಡಿಯು' 'ನಿಯಂತ್ರಿಸು' ಎಂಬ ಅರ್ಥಗಳಿವೆ. ಮಾನವನ ಪ್ರಮುಖ ಇಚ್ಛೆಗಳ ನಿಯಂತ್ರಣದ ತರಬೇತಿಯೇ ಉಪವಾಸ. ಉಪವಾಸದಿಂದ ಆಧ್ಯಾತ್ಮದೆಡೆಗೆ ಸರಿಯುವ, ಸೃಷ್ಟಿಕರ್ತನಿಗೆ ಹತ್ತಿರವಾಗುವ ಕಲ್ಪನೆಯು ಅತ್ಯಂತ ಮಹತ್ತರವಾದುದ್ದು[೮].

ಉಪವಾಸವೆಂದರೆ ಕೇವಲ ಹೊಟ್ಟೆಯ ಉಪವಾಸವಲ್ಲ. ಬದಲಿಗೆ ಅಂಗಾಂಗಗಳ ಉಪವಾಸ ಎಂದು ಕರೆಯಲಾಗುತ್ತದೆ. ಉಪವಾಸವು ಸಹನೆ, ಮತ್ತು ತಾಳ್ಮೆಯ ಪಾಠವನ್ನು ನೀಡುತ್ತದೆ. ಅನುಕಂಪ ಮತ್ತು ಮಾನವೀಯತೆಯನ್ನು ಕಲಿಸುತ್ತದೆ. ಹಸಿವೆಯನ್ನು ಅನುಭವಿಸಿದವನಿಗೆ ಮಾತ್ರ ಹಸಿದವನ ಕಷ್ಟವನ್ನರಿಯಲು ಸಾಧ್ಯ. ಉಪವಾಸದಿಂದ 'ಆತ್ಮ ಶುದ್ಧಿಯಾದಂತೆ' ದೇಹಶುದ್ಧಿಯೂ ಆಗುತ್ತದೆ. ಪ್ರವಾದಿ ಮುಹಮ್ಮದರು (ಸ) 'ನೀವು ಉಪವಾಸ ಆಚರಿಸಿ, ಆ ಮೂಲಕ ನೀವು ಆರೋಗ್ಯವಂತರಾಗಬಹುದು' ಎಂದಿದ್ದಾರೆ[೯].

ಉಪವಾಸದ ತಿಂಗಳು ಮುಸ್ಲಿಮರು ತಮ್ಮ ಸಂಪತ್ತಿನ ಶೇಕಡಾ ೨.೫ ಭಾಗವನ್ನು ಕೃಷಿ ಆದಾಯದ ಶೇಕಡಾ ೧೦ನೇ ಭಾಗವನ್ನು ಕಡ್ಡಾಯವಾಗಿ ಸಂಬಂಧಿಕರಿಗೆ, ನೆರೆಹೊರೆಯವರಿಗೆ, ಇನ್ನುಳಿದವರಿಗೆ ಹಂಚುತ್ತಾರೆ. ಇದನ್ನು ಜಕಾತ್ ಎನ್ನುತ್ತಾರೆ. ರಂಜಾನ್ ಹಬ್ಬದ ದಿನ ಫಿತರ್ ಜಕಾತನ್ನು ಶೇಕಡಾ ೨.೫ ಧಾನ್ಯ ಪ್ರತಿಯೊಬ್ಬ ಮುಸ್ಲಿಂಮನು ಬಡವರಿಗೆ ದಾನಮಾಡಬೇಕು. ಇದು ಕಡ್ಡಾಯದಾನವಾಗಿರುತ್ತದೆ. ಬಡವನೂ ಹಬ್ಬವನ್ನು ಸಂತೋಷದಿಂದ ಆಚರಿಸುವುದೇ ಈ ಫಿತರ್ ಜಕಾತಿನ ಉದ್ದೇಶ[೧೦].

ಹಬ್ಬದ ದಿನ ಗಂಡಸರೆಲ್ಲರೂ ಮಸೀದಿಗೆ ಹೋಗಿ ಪ್ರಾರ್ಥನೆ ಸಲ್ಲಿಸಿ ಒಬ್ಬರನ್ನೊಬ್ಬರು ಆಲಿಂಗಿಸಿ ಮನೆಗೆ ಬರುತ್ತಾರೆ. ಮನೆಯಲ್ಲಿ ಬಗೆ ಬಗೆಯ ತಿಂಡಿ ತಿನಿಸುಗಳು, ಬಿರ್ಯಾಣಿ ಮಾಡಿ ನೆರೆಹೊರೆಯವರಿಗೆ ಕೊಟ್ಟು ತಿನ್ನುವುದು ಮತ್ತು ಸಂಬಂಧಿಕರನ್ನು, ಮನೆಯವರನ್ನು ಭೇಟಿಯಾಗುವುದೂ ರೂಢಿಯಲ್ಲಿದೆ.

## ಶಬೆ ಮಿಅರಾಜ್

ಶಬೆ ಮಿಅರಾಜ್ ಎಂದರೆ ಮಿಅರಾಜ್‌ನ ಘಟನೆ ನಡೆದ ರಾತ್ರಿ. ಅದು 'ರಜಬ್' ತಿಂಗಳ ೨೭ ನೇ ರಾತ್ರಿಯಾಗಿತ್ತು. ಆ ಪವಿತ್ರ ರಾತ್ರಿಯಂದು ಪ್ರವಾದಿವರ್ಯರನ್ನು (ಸ) ಅತ್ಯಂತ ಉನ್ನತ ಸ್ಥಾನದವರೆಗೆ ಕೊಂಡೊಯ್ಯಲಾಯಿತು. ಒಬ್ಬ ಸಾಮಾನ್ಯ ಮನುಷ್ಯನ ಕಲ್ಪನೆಗೂ ನಿಲುಕಲಾರದಂತಹ ಘಟನೆಯಾಗಿತ್ತದು. ಈ ಘಟನೆ ನಡೆದಾಗ ಪ್ರವಾದಿ ಮುಹಮ್ಮದ್‌ರಿಗೆ (ಸ) ಪ್ರವಾದಿತ್ವ ದೊರೆತು ೧೨ ವರ್ಷವಾಗಿತ್ತು. ಅವರ ಪ್ರಾಯ ೫೨ ವರ್ಷಗಳಾಗಿತ್ತು. ತಮ್ಮ ಚಿಕ್ಕಪ್ಪನ ಮಗಳು ಉಮ್ಮು ಹಾನಿಯವರ ಮನೆಯಲ್ಲಿ ಮಲಗಿದ್ದ ಪ್ರವಾದಿ ಮುಹಮ್ಮದ್‌ರನ್ನು (ಸ) ಹ.ಜಿಬ್ರೀಲ್ ರವರು(ಅ) ಎಬ್ಬಿಸಿ ಸಶರೀಕವಾಗಿ 'ಬುರಾಕ್' ಎಂಬ ಪ್ರಾಣಿಯ ಸವಾರಿಯ ಮೂಲಕ 'ಬೈತುಲ್ ಮುಕ್ವಿಸ್' (ಇಸ್ರಾಈಲ್‌ನ ಭೂಪ್ರದೇಶ) ವರೆಗೆ ಕರೆದೊಯ್ದರು. ಅಲ್ಲಿ ಅವರು ಗತಪ್ರವಾದಿಗಳೆಲ್ಲರನ್ನೂ ಭೇಟಿ ಮಾಡಿದುದಲ್ಲದೇ ಸ್ವಯಂ ತಾವು ನೇತೃತ್ವವಹಿಸಿ ನಮಾಝ್ ನೆರೆವೇರಿಸಿದರು. ಅಲ್ಲಿಂದ ಮುಂದೆ ಸಾಗಲು ಅವರಿಗೆ ಸೋಪಾನ ನೀಡಲಾಯಿತು. 'ಬುರಾಕ' ನ್ನು ಅಲ್ಲಿಯೇ ಕಟ್ಟಿ ಹಾಕಿ ಸೋಪಾನದ ಮೂಲಕ ಪ್ರವಾದಿ ಮುಹಮ್ಮದರು(ಸ) ಆಕಾಶದ ಮೊದಲ ಅಂತಸ್ತಿಗೆ ಪ್ರಯಾಣ ಬೆಳೆಸಿದರು. ಅರಬಿ ಭಾಷೆಯಲ್ಲಿ ಸೋಪಾನವನ್ನು 'ಮಿಅರಾಜ್' ಎನ್ನಲಾಗುತ್ತದೆ. ಇಲ್ಲಿ ಸೋಪಾನವನ್ನು ಬಳಸಿದ್ದರಿಂದ ಈ ಘಟನೆಯನ್ನು 'ಮಿಅರಾಜ್' ಘಟನೆ ಎಂದೂ ಹಾಗೂ ಈ ರಾತ್ರಿಯನ್ನು 'ಶಬೆ ಮಿಅರಾಜ್' ಎಂದೂ ಸಾಮಾನ್ಯವಾಗಿ ಕರೆಯಲಾಗುತ್ತದೆ.

ಈ ಯಾತ್ರೆಯ ಸಮಯದಲ್ಲಿ ನೀಡಲಾದ ಆದೇಶಗಳಾವುವೆಂದರೆ, ಏಕದೇವ ವಿಶ್ವಾಸದ ಪಾಲನೆ, ಮಾತಾಪಿತರ ಸೇವೆ, ಸಾಮಾಜಿಕ ಜೀವನದಲ್ಲಿ ಪರಸ್ಪರ ನ್ಯಾಯಪಾಲನೆ, ಸಂಪತ್ತಿನ ಸದ್ಬಳಕೆ, ದುಂದುವೆಚ್ಚಕ್ಕೆ ತಡೆ, ವ್ಯಭಿಚಾರಕ್ಕೆ ನಿಷೇಧ, ಬಂಧು ಬಳಗ ಆಪ್ತೇಷ್ಟರಿಗೆ ಸಹಾಯ ಹಸ್ತ, ಮುಗ್ಧ ಮಾನವ ಹತ್ಯೆಗೆ ವಿರೋಧ, ವಚನ ಪಾಲನೆ......ಇತ್ಯಾದಿ.

ಈ ಐತಿಹಾಸಿಕ ಯಾತ್ರೆಯ ಸ್ಮರಣಾರ್ಥವಾಗಿ ಕೆಲವೆಡೆ ಮುಸಲ್ಮಾನರು ಅಂದು ತಮ್ಮ ಮನೆ ಬೀದಿ ಹಾಗೂ ಮಸೀದಿಗಳನ್ನು ಅಲಂಕರಿಸುತ್ತಾರೆ. ಸಾಯಂಕಾಲ ವಿದ್ಯುತ್ ದೀಪಗಳಿಂದ ಬೆಳಗುತ್ತಾರೆ. ಕೆಲವರು ಹಣತೆ ಹಾಗೂ ಮೇಣದ ಬತ್ತಿಗಳನ್ನು ಹಚ್ಚಿಡುವುದುಂಟು. ರಾತ್ರಿ 'ಇಶಾ' ನಮಾಝ್ ನಂತರ ಮಸೀದಿಗಳಲ್ಲಿ ಕೆಲವೆಡೆ ಧಾರ್ಮಿಕ ಸಭೆಗಳನ್ನು ನಡೆಸುತ್ತಾರೆ. ಅಲ್ಲಾಹನನ್ನು ಸುತ್ತಿಸುವ ಹಾಗೂ ಪ್ರವಾದಿ ಮಹಮ್ಮದರ(ಸ) ಪ್ರಶಂಸೆಯ ಗೀತೆಗಳನ್ನು ಹಾಡಲಾಗುತ್ತದೆ. ಸಿಹಿ ಹಂಚಲಾಗುತ್ತದೆ ಹಾಗೂ ಕೆಲವರು ಅಂದು ರಾತ್ರಿ ಇಡೀ ಜಾಗರಣೆ ಮಾಡಿ ಪ್ರಾರ್ಥನೆ, ಆರಾಧನೆಗಳಲ್ಲಿ ಕಾಲ ಕಳೆಯುತ್ತಾರೆ[೧೧].

## ಈದುಲ್ ಅಝ್‌ಹಾ

ದುಲ್ ಹಜ್ಜ್ ತಿಂಗಳ ೧೦ ನೇ ತಾರೀಕಿನಂದು ಆಚರಿಸಲ್ಪಡುವ ಈ ಹಬ್ಬಕ್ಕೆ ಸಾಮಾನ್ಯವಾಗಿ 'ಈದೆ ಕುರ್ಬಾನ್' ಎಂದು ಕರೆಯಲಾಗುತ್ತದೆ. ಬ್ಯಾರಿಗಳು ಈ ಹಬ್ಬವನ್ನು 'ಬೆಲಿಯೆ ಪೆರ್ನಾಳ್' ಎನ್ನುತ್ತಾರೆ. ಈ ಹಬ್ಬದಂದು ನೀಡಲಾಗುವ ಬಲಿದಾನವು ಇಸ್ಲಾಮ್ ಇತಿಹಾಸದಲ್ಲಿ ಘಟಿಸಿದ ಅಪೂರ್ವ ಘಟನೆಯ ಸ್ಮರಣೆಯಾಗಿದ್ದು, ಆ ಕಾರಣದಿಂದಲೇ ಇದನ್ನು ತ್ಯಾಗಸ್ಮರಣೆಯ 'ಅಪೂರ್ವ ಹಬ್ಬ' ಎಂದು ಬಣ್ಣಿಸಲಾಗಿದೆ.

ಪ್ರವಾದಿ ಇಬ್ರಾಹೀಮರು (ಅ) ಪುತ್ರ ಇಸ್ಮಾಈಲ್‌ರೊಡನೆ 'ಮಗನೇ ನಿನ್ನನ್ನು ನಾನು ಬಲಿ ನೀಡುವ ಕನಸು ಕಂಡೆ. ನಿನ್ನ ಅಭಿಪ್ರಾಯವೇನು?' ಎಂದು ಪ್ರಶ್ನಿಸಿದಾಗ, 'ಅಪ್ಪಾ ಆಜ್ಞೆಯನ್ನು ಪಾಲಿಸಿರಿ, ಅಲ್ಲಾಹನ ಕೃಪೆಯಿದ್ದರೆ ನೀವು ನನ್ನನ್ನು ಸಹನಶೀಲದಲ್ಲಿ ಕಾಣುವಿರಿ ಎಂದು ಉತ್ತರಿಸಿದರು. (ಪವಿತ್ರ ಕುರ್ ಆನ್; ಅಸ್ಸಾಪ್ಫಾತ್ ;೧೦೨) ಹೀಗೆ ಅವರು ತಮ್ಮ ಮಗನನ್ನು ಬಲಿ ಕೊಡಲು ಸಿದ್ಧರಾದಾಗ, ಒಂದು ಆಡಿನ ದಂಡೆತೆತ್ತು ಅಲ್ಲಾಹನು ಇಸ್ಮಾಈಲ್‌ರನ್ನು ವಿಮೋಚನೆ ಗೊಳಿಸಿದರು. ಈ ಘಟನೆಯ ಸ್ಮರಣೆಗಾಗಿ ಸಾಮರ್ಥ್ಯವುಳ್ಳ ಮುಸಲ್ಮಾನರು ಅಂದು ಕುರ್ಬಾನಿಯನ್ನು ನೀಡುತ್ತಾರೆ. ಬಲಿದಾನಕ್ಕಾಗಿ ಯಾವುದೇ ಅಂಗ ವೈಕಲ್ಯವಿಲ್ಲದ ಉತ್ತಮ ಪ್ರಾಣಿಯನ್ನು ಆಯ್ಕೆ ಮಾಡಲಾಗುತ್ತದೆ. ಒಬ್ಬರಿಗೆ ಒಂದು ಆಡು, ಕುರಿ

ಹಾಗೂ ಟಗರು ಸಾಕು. ಆದರೆ ಆಕಳು ಅಥವಾ ಒಂಟೆಯಾದಲ್ಲಿ ಅದರಲ್ಲಿ ಗರಿಷ್ಟ ಏಳುಜನ ಪಾಲುದಾರರಾಗಬಹುದು. ಬಲಿ ಪ್ರಾಣಿಯನ್ನು ಕಿಬ್ಲಾಭಿಮುಖವಾಗಿ ಮಲಗಿಸಿ 'ದಿಬಹ್' ಮಾಡಲಾಗುತ್ತದೆ. ಬಲಿಪ್ರಾಣಿಯ ಮಾಂಸದ ಮೂರನೇ ಒಂದು ಭಾಗವನ್ನು ಬಲಿ ನೀಡಿದವನು ತಾನೇ ಇಟ್ಟುಕೊಳ್ಳಬಹುದು. ಉಳಿದ ಎರಡು ಭಾಗಗಳಲ್ಲಿ ಒಂದು ಭಾಗವನ್ನು ಬಡವರಿಗೆ ಇನ್ನೊಂದು ಭಾಗವನ್ನು ಬಂಧು–ಬಳಗ, ಆಪ್ತೇಷ್ಟರಿಗೂ ಹಂಚುತ್ತಾರೆ. ಪ್ರಾಣಿಬಲಿಯನ್ನು ಈದ್‌ನ ನಮಾಝ್ ನಿರ್ವಹಿಸಿದ ನಂತರವೇ ಮಾಡಬೇಕು. ಏಕೆಂದರೆ ಬಲಿಕರ್ಮವು ಒಂದು ಆರಾಧನೆಯಾಗಿದ್ದು, ಪ್ರತಿಯೊಂದು ಆರಾಧನೆಯನ್ನು ಅಲ್ಲಾಹನು ನಿಶ್ಚಯಿಸಿದ ವಿಧಾನ ಹಾಗೂ ಸಮಯದ ಮಿತಿಯೊಂದಿಗೆ ನಿರ್ವಹಿಸುವುದು ಕಡ್ಡಾಯವಾಗಿದೆ. ಈದುಲ್ ಅಝ್‌ಹಾದ ಇನ್ನೊಂದು ವಿಶೇಷತೆ ಏನೆಂದರೆ ಇದು ಮುಸ್ಲಿಮರ ಕಡ್ಡಾಯ ಆರಾಧನಾ ಕರ್ಮಗಳಲ್ಲೊಂದಾದ 'ಹಜ್ಜ್‌ನ ಮುಕ್ತಾಯವನ್ನು ಸಾರುತ್ತದೆ[೧೨].

ಇತ್ತೀಚೆಗೆ ಜಾಮಾತುಲ್ ಇಸ್ಲಾಮಿಯಾದವರು ಈ ರೀತಿ ಹೇಳುತ್ತಾರೆ. ಮುಸ್ಲಿಂ ಹಬ್ಬಗಳು ಎರಡೇ. 'ಈದಲ್ ಫಿತ್ರ್ ಮತ್ತು ಈದುಲ್ ಅಝ್‌ಹಾ' ವಿಭಿನ್ನ ಸಂಸ್ಕೃತಿಗಳ ಪ್ರಭಾವದಿಂದ, ಇವುಗಳೊಂದಿಗೆ ಇನ್ನೂ ಅನೇಕ ಹಬ್ಬಗಳು 'ಮುಸ್ಲಿಂ ಹಬ್ಬ' ಗಳೆನ್ನಿಸಿಕೊಳ್ಳುತ್ತಿರುವುದು ಒಂದು ಗಂಭೀರ ವಿಡಂಬನೆಯಾಗಿದೆ[೧೩].

## ೩.೨ ಮದುವೆ ಮತ್ತು ಇತರ ಸಮಾರಂಭಗಳು

ಬ್ಯಾರಿಗಳು ಮದುವೆಯನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ. ಈಗ ಮದುವೆ ಎಂಬುದು ಒಂದು ದಿನ ಅಥವಾ ಒಂದು ಗಂಟೆಯಲ್ಲಿ ಮುಗಿದರೆ ಹಿಂದೆ ಅದು ಎರಡು ವಾರಗಳ ಕಾಲ ನಡೆಯುತ್ತಿತ್ತು ಎಂದು ಹಿರಿಯರು ಜ್ಞಾಪಿಸುತ್ತಾರೆ[೧೪]. ಬ್ಯಾರಿಗಳ ಮದುವೆ ಪದ್ಧತಿಯು ತನ್ನದೇ ಆದ ನೀತಿ–ನಿಯಮಗಳನ್ನು ಹೊಂದಿದ್ದು ಹೆಚ್ಚಿನ ಕೆಲವು ಕಟ್ಟುಪಾಡುಗಳು ತುಳುವರಿಂದ ಪ್ರಭಾವಿತವಾದುದಾಗಿದೆ[೧೫].

**ಪೆಣ್ಣ್ ನೋಕುರೆ:** ಪೆಣ್ಣ್ ನೋಕುರೆ ಅಂದರೆ ಹೆಣ್ಣು ನೋಡುವುದು ಎಂದರ್ಥ. ಇಲ್ಲಿ ಗಂಡು ತನಗೆ ಬೇಕಾದ ಹುಡುಗಿಯನ್ನು ಆಯ್ಕೆ ಮಾಡುವ ಬದಲು ಹುಡುಗನ ತಾಯಿ ಅಥವಾ ಅಕ್ಕಂದಿರು ಮುಂದಾಳತ್ವ ವಹಿಸುತ್ತಾರೆ. ತಮಗೆ ಹುಡುಗಿ ಒಪ್ಪಿಗೆಯಾದಲ್ಲಿ ಉಂಗುರ ತೊಟ್ಟು ಹೋಗುತ್ತಾರೆ. ಬ್ಯಾರಿ ಮುಸ್ಲಿಮರ ಪ್ರತಿಯೊಂದು ಕಾರ್ಯಕ್ರಮವೂ ಸ್ಥಳೀಯ ಮೈಲಾರ್‌ರವರ ದುಆದೊಂದಿಗೆ ಪ್ರಾರಂಭವಾಗುತ್ತದೆ.

**ವರಪ್ಪು:** ಅಂದರೆ ನಿಶ್ಚಿತಾರ್ಥ ಎಂದರ್ಥ. ಇದು ವೈವಾಹಿಕ ಸಂಬಂಧಗಳನ್ನು ಏರ್ಪಡಿಸುವ ದ್ವಿತೀಯ ಹಂತ. ಇದರ ಮುಖ್ಯ ಉದ್ದೇಶ ಹೆಣ್ಣು – ಗಂಡಿಗೆ ಸಂಬಂಧಿಸಿದ ಪ್ರಮುಖರೆಲ್ಲಾ ಒಂದೆಡೆ ಸೇರಿ ಕಾಸಿ–ಬಂಗಾರು ಮತ್ತು ಮದುವೆಯ ದಿನಾಂಕವನ್ನು ಗೊತ್ತು ಪಡಿಸುವುದು ಹಾಗೂ ಪ್ರಮುಖರ ಮರ್ಯಾದೆಗೆ ಗೌರವ ಕೊಡುವುದಾಗಿದೆ. ಈ ಕಾರ್ಯಕ್ರಮ ಗಂಡಿನ ಮನೆಯಲ್ಲಿ ನಡೆಯುತ್ತದೆ ಆದರೆ ಇಲ್ಲಿ ಬ್ಯಾರಿ ಸ್ತ್ರೀಯ ಪಾತ್ರವು ಶೂನ್ಯವಾಗಿದೆ[೧೬].

**ಕೇಳಿಕೇಕ್‌ರೆ:** ಇದು ವರಪ್ಪು ಆಗಿ ಮದುವೆಗೆ ಒಂದು ವಾರ ಇರುವಾಗ ಗಂಡು–ಹೆಣ್ಣಿನ ಕಡೆಯವರು ತಮ್ಮ ತಮ್ಮ ಜಮಾತ್ ಪಳ್ಳಿಯಲ್ಲಿ ಆಯಾ ಜಮಾತ್‌ನವರು ನಿರ್ಧರಿಸಿದ ಮೊತ್ತವನ್ನು ಪಳ್ಳಿಯ ಖತೀಬ್ ಅಥವಾ ಅಧ್ಯಕ್ಷರ ಕೈಯಲ್ಲಿತ್ತು ನಾನ್ ಕೇಳಿ ಕೇಕ್‌ರೆ ಎಂದು ಹೆಣ್ಣು ಗಂಡಿನ ತಂದೆ ಅಥವಾ ಸಂಬಂಧಪಟ್ಟವರು ಮೂರುಬಾರಿ ಉಚ್ಚರಿಸುತ್ತಾರೆ. ಅಂದರೆ ನನ್ನ ಮಗ ಅಥವಾ ಮಗಳ ಮದುವೆಯ ವಿಷಯವನ್ನು ಸಾವಿರ ಜಮಾತರಲ್ಲಿ ತಿಳಿಯಪಡಿಸುತ್ತೇನೆ ಎಂದು ಕೇಳಿಕೆ ಕೋರುತ್ತಾರೆ.

**ತಿರ್‌ಂಬು ಇಡ್ಡೆ:** ಈ ಕಾರ್ಯಕ್ರಮ ಒಂದು ವಾರದ ಮುಂಚೆ ನಡೆಯುತ್ತದೆ. ಹುರುಳಿ, ಬೆಳ್ತಿಗೆ, ಅರಸಿನ ಹಾಗೂ ಮೊಟ್ಟೆಯ ಬಿಳಿ ಅಂಶವನ್ನು ತೆಂಗಿನಕಾಯಿಯ ರಸಕ್ಕೆ ಚೆನ್ನಾಗಿ ಬೆರೆಸಿ ಕಲಸಬೇಕು. ಅಂಟಾದ ಈ ಹಳದಿ ಅಂಶವನ್ನು ಹೆಣ್ಣಿನ ಮೈಗೆ ಬೆಳಿಗ್ಗೆ ಹಚ್ಚಿ ಮುಸ್ಸಂಜೆಗೆ ಸಿಗಸ ಹುಡಿಯಲ್ಲಿ ಸ್ನಾನ ಮಾಡಲಾಗುತ್ತದೆ. ಇದಕ್ಕೆ ತಿರ್‌ಂಬು ಇಡ್ಡೆ ಎನ್ನುವರು[೧೭].

**ಮ್ಯೊಲಾಂಜಿ ಪ್ಪಾಟ್:** 'ಮ್ಯೊಲಾಂಜಿ' ಎನ್ನುವುದು ಬ್ಯಾರಿ ವಧುವಿನ ಮನೆತನದಲ್ಲಿ ನಡೆಯುವ ಮತ್ತೊಂದು ಸಂಭ್ರಮ[೧೪]. ಮ್ಯೊಲಾಂಜಿ ಪ್ಪಾಟ್ ಎಂದರೆ ಮದರಂಗಿ ಹಾಡು ಎಂದರ್ಥ. ಈ ಕಾರ್ಯಕ್ರಮ ಸಾಮ್ಯಾನವಾಗಿ ಮದುವೆಯ ಮುಂಚಿನ ದಿವಸದ ರಾತ್ರಿ ನಡೆಯುತ್ತದೆ. ಅಂದು ಮುಸ್ಸಂಜೆಗೆ ಗಂಡಿನ ಕಡೆಯಿಂದ ಕೆಲವು ಸ್ತ್ರೀಯರು ಮದರಂಗಿಯನ್ನು ಹೆಣ್ಣಿನ ಮನೆಗೆ ಕೊಂಡೊಯ್ದು ರಂಗೇರಿದ ಪುದಿಯೆ ಪೆಣ್ಣ್‌ನ ಕೈಗೆ ಮ್ಯೊಲಾಂಜಿ ಇಟ್ಟು ಪ್ಪಾಟ್ ಹಾಡುತ್ತಾರೆ. ಹಾಡುವ ಮೊದಲು ಹುಡುಗನ ಕಡೆಯವರಿಂದ ಹುಡುಗಿಗೆ ಆಭರಣ, ಹಲ್ವಾ, ಬಾಳೆ, ಮತ್ತಿತರ ಮಿಠಾಯಿಗಳು ಬರಲೇಬೇಕು. ಸೇರಿದವರೆಲ್ಲಾ ನಗೆ ಚೆಲ್ಲುವ ಮಾತುಗಳನ್ನಾಡಿ ಇನ್ನಷ್ಟು ಕುಶಿ ಕೊಡುತ್ತಾರೆ.



**ಖಾಯಿಂತ್:** ನಿಖಾಹ್‌ಗೆ ಬ್ಯಾರಿ ಭಾಷೆಯಲ್ಲಿ ಖಾಯಿಂತ್ ಎನ್ನಲಾಗುತ್ತದೆ. ಪ್ರಾಚೀನ ಕಾಲದಲ್ಲಿ ಖಾಯಿಂತ್ ಸ್ಥಳೀಯ ಪಳ್ಳಿಯಲ್ಲಿ ನಡೆಯುತ್ತಿತ್ತು. ಆದರೆ ಇಂದು ಸಾಮಾನ್ಯವಾಗಿ ಖಾಯಿಂತ್ ವರನ ಮನೆಯಲ್ಲಿ ನಡೆಯುತ್ತದೆ[೧೫]. ವಧುವಿನ ತಂದೆ ಅಥವಾ ಸಂಬಂಧಪಟ್ಟವರಲ್ಲಿ ಒಬ್ಬರು ಹೆಣ್ಣಿನ ಬಳಿ ಬಂದು ಈ ಮದುವೆ ನಿನಗೆ ಒಪ್ಪಿಗೆಯಾ? ಎಂದು ಮೂರು ಬಾರಿ ಕೇಳಿ ಅವಳ ಸಮ್ಮತಿಯ ಮೇರೆಗೆ ವರನ ಮನೆಯತ್ತ ಹೊರಡಲು ಮುಂದಾಗುತ್ತಾರೆ. ನಂತರ ವಿಶೇಷ ಅಲಂಕೃತ ಮಂಚದ ಮೇಲೆ ವರ ಮತ್ತು ವಧುವಿನ ತಂದೆಯು ಎದುರುಬದುರಾಗಿ ಕೂತು ಪರಸ್ಪರ ಕೈ ಕುಲುಕಿ ಚುಂಬಿಸುತ್ತಾರೆ. ಖತೀಬರು ಅವರೊಳಗೆ ಖಾಯಿಂತನ ಧ್ವನಿ ಮೊಳಗಿಸುತ್ತಾರೆ. ಆ ಮುನ್ನ ಎರಡೂ ಕಡೆಯ ಜಮಾತಿನ ದಾಖಲಾತಿ ಪಟ್ಟಿಯಲ್ಲಿ ವಧು–ವರರ ಊರು, ಹೆಸರು, ತಂದೆ ತಾಯಿಗಳ ಹೆಸರು ಮತ್ತು ಇಬ್ಬರು ಸಾಕ್ಷಿಗಳ ಸಹಿಯನ್ನು ಸ್ಥಳೀಯ ಮುಕ್ರಿಯವರು ದಾಖಲು ಮಾಡಿಕೊಳ್ಳುತ್ತಾರೆ.

ಸಾಮಾನ್ಯವಾಗಿ ಹಿಂದೆ ರಾತ್ರಿ ಹೊತ್ತಲ್ಲಿ ಮಾತ್ರ ಮದುವೆ ನಡೆಯುತ್ತಿತ್ತು. ಆದರೆ ಇಂದು ಬ್ಯಾರಿಗಳು ಹಾಲ್‌ಗಳಲ್ಲಿ ಮದುವೆ ನಡೆಸುತ್ತಾರಲ್ಲದೆ ದಿಬ್ಬಣ..... ಮುಂತಾದ ಕೆಲವು ವಿಶೇಷ ಕಟ್ಟುಪಾಡುಗಳನ್ನು ದೂರಕ್ಕೆ ತಳ್ಳಿ ಆಧುನಿಕ ವೈಯಾರತೆಯಲ್ಲಿ ಮೆರೆಯಿತ್ತಿರುವುದು ಖೇದಕರ.

**ಕುಟ್ಟು ತನ್ನಿ:** ಮದುಮಗಳು ತನ್ನ ಗಂಡನ ಮನೆಯ ಹೊಸ್ತಿಲು ದಾಟಿ ದಾರಂದದ ಬಳಿ ಹೋದಾಗ ಅವಳ ಅತ್ತೆಯು ಒಂದು ಬಟ್ಟಲಿಗೆ ಒಂದಿಷ್ಟು ಬೂದಿ ಮತ್ತು ಅರಸಿನ ಹುಡಿ ಹಾಕಿ ನೀರಲ್ಲಿ ಕಲಸಿಟ್ಟು ಅಲ್ಲಿ ನಿಂತಿರುತ್ತಾಳೆ. ಇದಕ್ಕೆ ಕುಟ್ಟು ತನ್ನಿ ಎನ್ನುವರು. ಕಲಸಿಟ್ಟ ಈ ನೀರನ್ನು ಅತ್ತೆಯು ಪುದಿಯೆ ಪೆಣ್ಣ್‌ನ ತಲೆಯ ಸುತ್ತ ಮೂರು ಬಾರಿ ಸುತ್ತುತ್ತಾ ಸಲಾತ್ ಹೇಳುತ್ತಲೇ ಅವಳ ಮೈಗೆ ಸ್ವಲ್ಪ ಸಿಂಪಡಿಸುತ್ತಾಳೆ. ಆದರೆ ಈ ಸಂಪ್ರಾದಾಯವನ್ನು ಕೆಲವರು ವಿರೋಧಿಸುತ್ತಾರೆ[೨೦].

**ತಾಲ:** ತಾಲ ಎಂದರೆ ನವದಂಪತಿಗಳ ಮೊದಲ ರಾತ್ರಿಯಾಗಿರುತ್ತದೆ. ಮದುಮಗ ತನ್ನ ಮೊದಲ ರಾತ್ರಿಯನ್ನು ಹೆಂಡ್ತಿಯ ಮನೆಯಲ್ಲಿ ಕಳೆಯಬೇಕಾಗುತ್ತದೆ. ಹಿಂದೆ ಈ ತಾಲವು ಮದುವೆ ಮರುದಿವಸದ ರಾತ್ರಿ ನಡೆಯುತ್ತಿತ್ತು. ಆದರೆ ಇಂದು ಬ್ಯಾರಿಗಳ ಮದುವೆಯು ಹಗಲು ಹೊತ್ತಲ್ಲಿ ನಡೆಯುತ್ತಿದ್ದು ತಾಲವನ್ನು ಆ ದಿನವೇ ಮಾಡಲಾಗುತ್ತದೆ.

**ಬಳೆ ಬೆಯ್‌ಕ್ರೆ:** ತಾಲದಂದಿನ ಸವಿಯುಂಡ ಮದುಮಗಳು ಮರುದಿವಸ ತನ್ನ ಗಂಡನ ಮನೆಗೆ ಹೋಗಬೇಕಾಗುತ್ತದೆ. ಮದುಮಗಳನ್ನು ಕರೆದುಕೊಂಡು ಹೋಗಲು ಗಂಡಿನ ಕಡೆಯಿಂದ ಒಂದಿಬ್ಬರು ಗಂಡಸರು ಹಾಗೂ ಹಲವಾರು ಸ್ತ್ರೀಯರು ಬರುತ್ತಾರೆ. ಬರುವಾಗ ಹೂ, ಹೂವಿನ ಎಣ್ಣೆ, ಕಾಡಿಗೆ ಮತ್ತಿತರ ವಸ್ತುಗಳನ್ನು ತಂದು ಸ್ವತಃ ತಾವೇ ಮದುಮಗಳನ್ನು ಶೃಂಗರಿಸುತ್ತಾರೆ.

**ಬಳೆ ಬೆಚ್ಚಿ ಕುಟ ಪೋಂಡೆ:** ಮದುವೆ ಕಳೆದು ಮೂರು ದಿವಸದ ನಂತರ ಮದುಮಗಳನ್ನು ತನ್ನ ಗಂಡನ ಮನೆಯಿಂದ ತವರು ಮನೆಗೆ ಕರೆತರಲು ಅವಳ ಮನೆಯಿಂದ ಹಲವಾರು ಸ್ತ್ರೀಯರು ಹೋಗಬೇಕಾಗುತ್ತದೆ. ಮದುಮಗ ಬಳೆ ಮಾರುವವನನ್ನು ಸ್ವತಃ ತನ್ನ ಮನೆಗೆ ಕರೆತಂದು ಅಲ್ಲಿ ಸೇರಿದ ಎಲ್ಲಾ ಹೆಣ್ಣು ಮಕ್ಕಳಿಗೆ ಬಳೆ ತೊಡಿಸುವ ವ್ಯವಸ್ಥೆ ಮಾಡುತ್ತಾನೆ. ಹೀಗೆ ಬಳೆ ತೊಟ್ಟ ಮದುಮಗಳನ್ನು ಅವಳ ಕಡೆಯಿಂದ ಬಂದ ಸ್ತ್ರೀಯರು ಶೃಂಗರಿಸಿ, ತವರೂರಿಗೆ ಕರೆದುಕೊಂಡು ಹೋಗುವುದಕ್ಕೆ ಬಳೆ ಬೆಚ್ಚಿ ಕುಟ ಪೋಂಡೆ ಎನ್ನುವರು.

## ಇತರ ಸಮಾರಂಭಗಳು

**ಅಪ್ಪತ್ತೆ ಮಂಞಳ:** ಬ್ಯಾರಿ ಭಾಷೆಯಲ್ಲಿ ಸೀಮಂತಕ್ಕೆ ಅಪ್ಪತ್ತೆ ಮಂಞಳ ಎನ್ನುವರು. ಈ ಸಮಾರಂಭ ಪತಿಯ ಮನೆಯಲ್ಲಿ ನಡೆಯುತ್ತದೆ. ಪುದಿಯೆಪೆಣ್ಣ್‌ಗೆ ಏಳು ತಿಂಗಳಾದೊಡನೆ ಒಳ್ಳೆಯ ದಿನ ನೋಡಿ ಅಪ್ಪತ್ತೆ ಮಂಞಳ ಮಾಡುವ ಏರ್ಪಾಡು ನಡೆಯುತ್ತದೆ.

ತವರು ಮನೆಯಿಂದ ಹತ್ತಾರು ಸ್ತ್ರೀಯರು ಚಿನ್ನಾಭರಣವನ್ನು ಉಡುಗೊರೆಯಾಗಿ ಹಿಡಿದುಕೊಂಡು ಗಂಡಿನ ಮನೆಗೆ ಬರುತ್ತಾರೆ. ಗಂಡಿನ ಮನೆಯಲ್ಲಿ ವಿಶೇಷ ಔತಣ ಕೂಟ ನಡೆಯುತ್ತದೆ. ಈ ಸಮಯದಲ್ಲಿ ಪತಿಯು ತನ್ನವಳಿಗಾಗಿ ವಿಶೇಷವಾಗಿ ತಂದ ಸೀರೆ, ರವಕೆಯನ್ನು ಹೆಣ್ಣಿನ ಕಡೆಯಿಂದ ಬಂದ ಸ್ತ್ರೀಯರು ಅವಳಿಗೆ ತೊಡಿಸುತ್ತಾರೆ. ಈ ಹಿಂದೆ ಪುದಿಯೆ ಪೆಣ್ಣ್ ಯಾವೆಲ್ಲಾ ತಿಂಡಿ–ತಿನಿಸುಗಳನ್ನು ಅತಿಯಾಗಿ ಇಷ್ಟಪಡುತ್ತಿದ್ದಳೋ ಅದನ್ನೆಲ್ಲಾ ಪತಿ ಮನೆಯವರೆಲ್ಲಾ ಸೇರಿಕೊಂಡು ತಯಾರಿಸುತ್ತಾರೆ ಬಸುರಿಗೆ ತಿನ್ನಿಸುವ ಕಾರ್ಯಕ್ರಮಕ್ಕೆ ಹಿಂದೆ ಅಪ್ಪತೆ ಮಂಞಳ ಎಂದು ಕರೆಯಲ್ಪಡುತ್ತಿದ್ದ ಈ ಆಚರಣೆಯು ಇಂದು ಬಿರಂದ್ ಎಂದು ನಾಮಾಂಕಿತಗೊಂಡಿದೆ.

**ಪೇರ್ ಬೆಯ್‌ಕ್‌ರೆ:** ಇದಕ್ಕೆ ಕನ್ನಡದಲ್ಲಿ ನಾಮಕರಣ ಮಾಡುವುದು ಎನ್ನುತ್ತಾರೆ. ಬ್ಯಾರಿ ಸಮುದಾಯದಲ್ಲಿ ಮಗುವಿನ ಜನ್ಮದ ಏಳನೇ ದಿನ ಈ ಪೇರ್ ಬೆಯ್‌ಕ್‌ರೆ ಕಾರ್ಯಕ್ರಮ ಮಾಡಲಾಗುತ್ತದೆ. ಆ ದಿನ ನೆರೆಕೆರೆಯವರಿಗೆ ಮಿಠಾಯಿ ಕಡ್ಲೆಯನ್ನು ವಿತರಿಸುವುದು ಈ ಕಾರ್ಯಕ್ರಮದ ವಿಶೇಷತೆಯಾಗಿರುತ್ತದೆ.

**ಕಜಂಬು:** ಮಗು ಹುಟ್ಟಿದ ಹದಿನೈದು ಅಥವಾ ಮೂವತ್ತರಂದು ಹೆಣ್ಣು ಗಂಡು ಭೇದಭಾವವಿಲ್ಲದೆ ಕಜಂಬು (ತಲೆ ಕ್ಷೌರ) ಮಾಡಲಾಗುತ್ತದೆ. ಇದಕ್ಕೆ ಬ್ಯಾರಿಗಳು ಕಜಂಬು ಎಡ್ಕಡೆ (ತಲೆ ಕ್ಷೌರ ಮಾಡುವುದು) ಎನ್ನುವರು. ಬ್ಯಾರಿಗಳ ಈ ಜನಪದ ಆಚರಣೆಯು ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಕಜಂಬು ಮಾಡಿದ ತಲೆಗೂದಲನ್ನು ತೊರೆ, ನದಿ, ಸಮುದ್ರಗಳಿಗೆ ಬಿಟ್ಟು ಬಿಡಲಾಗುತ್ತದೆ.

**ನಾಪೊವುರೆ ಕುಲಿ:** ಮಗುವಿನ ಜನ್ಮವಿತ್ತ ಹೆಣ್ಣು ತನ್ನ ನಲ್ವತ್ತನೇ ದಿನದಲ್ಲಿ ವಿಶೇಷ ಸ್ನಾನ ಮಾಡುತ್ತಾಳೆ ಇದಕ್ಕೆ ನಾಪೊವುರೆ ಕುಲಿ ಎನ್ನಲಾಗುತ್ತದೆ. ಆದರೆ ಹೆಣ್ಣು ಈ ನಲ್ವತ್ತು ದಿನಗಳಲ್ಲಿ ಸ್ನಾನ ಮಾಡಲಿಲ್ಲ ಎಂದು ಅರ್ಥವಲ್ಲ. ಹೆಣ್ಣಾದವಳು ತನ್ನ ಮಗುವಿನ ಜತೆಗೂಡಿ ನಲ್ವತ್ತನೆ ದಿನದಲ್ಲಿ ಗಂಡನ ಮನೆಗೆ ಹೋಗುವುದನ್ನು ರೂಢಿಯಾಗಿಸಿದ ಬ್ಯಾರಿಗಳು ಆ ದಿನ ಸ್ನಾನ ಮಾಡುವುದಕ್ಕೆ ನಾಪೊವುರೆ ಕುಲಿ ಎನ್ನುವರು.

**ಕಾದ್ ಕುತ್ತುರೊ ಮಂಞಳ್:** ಹೆಣ್ಣು ಮಗುವಿಗೆ ಆರು–ಹತ್ತು ತಿಂಗಳಲ್ಲಿ ಅಥವಾ ಒಂದು ಎರಡು ವರ್ಷದಲ್ಲಿ ಮೊದಲ ಬಾರಿಗೆ ಕಿವಿ ಚುಚ್ಚುವುದಕ್ಕೆ ಬ್ಯಾರಿಗಳು ಕಾದ್ ಕುತ್ತುರೊ ಮಂಞಳ ಎನ್ನುತ್ತಾರೆ. ಸಾಮಾನ್ಯವಾಗಿ ಇದನ್ನು ತುಳುನಾಡಿನ ಆಚಾರಿಯು ಬಂದು ಮಾಡುತ್ತಾನೆ. ಹಿಂದೆ ಈ ಕಾರ್ಯಕ್ರಮ ವಿಶೇಷ ಸಡಗರದ ಸಂಭ್ರಮದಿಂದ ಜರುಗುತ್ತಿತ್ತು.

**ಕುಟ್ಟಿಬೈಲ್:** ಬ್ಯಾರಿಗಳು ತಮ್ಮ ಮನೆ ಮಠ, ಅಂಗಡಿ ಮುಂತಾದವುಗಳನ್ನು ಕಟ್ಟುವ ಮೊದಲು ಕುಟ್ಟಿಬೈಲ್ ಮಾಡಿಸುವರು. ಅಂದರೆ ಮನೆ ಅಥವಾ ಇನ್ನಿತರ ಕಟ್ಟಡಗಳನ್ನು ಕಟ್ಟುವ ಜಾಗದ ಮಧ್ಯ ಭಾಗದಲ್ಲಿ ಪಾಲ್ ಕುಟ್ಟಿಯನ್ನು ಹೊಡೆಯಲಾಗುತ್ತದೆ ಇದಕ್ಕೆ ಸ್ಥಳೀಯ ಪಳ್ಳಿಯ ಮುಕ್ರಿಯವರು ಒಳ್ಳೆಯ ದಿನ ಮತ್ತು ಸಮಯವನ್ನು ನಿಗದಿಪಡಿಸುವರು. ಅಂದರೆ ಸುಬಹ್ ಬಾಂಗ್ ಮೊಳಗಿದ ನಂತರ ಹೊಡೆಯಲಾಗುತ್ತದೆ. ಸ್ಥಳೀಯ ಪಳ್ಳಿಯ ಮುಕ್ರಿಯವರಿಂದ ನಡೆಯಲ್ಪಡುವ ಈ ಶಂಕು ಸ್ಥಾಪನೆಗೆ ಬ್ಯಾರಿಗಳು ವಿಶೇಷ ಮಹತ್ವ ನೀಡಿದ್ದಾರೆ.

**ಅವ ಒಕ್ಕಲು:** ಬ್ಯಾರಿಗಳ ಗೃಹ ಪ್ರವೇಶ ವೈಶಿಷ್ಟ್ಯತೆಯನ್ನು ಪಡೆದಿದೆ. ಗೃಹ ಪ್ರವೇಶ ಮಾಡುವಾಗ ಆಚರಿಸುವ ಪದ್ಧತಿಯು ಸ್ಥಳೀಯ ತುಳುವರಿಂದ ಪ್ರಭಾವಿತವಾದುದಾಗಿದೆ. ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದ ಈ ಸಂಪ್ರದಾಯವನ್ನು ಬದಿಗೊತ್ತಿ ಯಾವುದೇ ಬ್ಯಾರಿ ಕುಟುಂಬವು ಗೃಹ ಪ್ರವೇಶ ಮಾಡಲಾರದು ಎಂಬುದು ಇಲ್ಲ ಉಲ್ಲೇಖ. ಸಾಮಾನ್ಯವಾಗಿ ಈ ಕಾರ್ಯಕ್ರಮವು ಪ್ರಾತ; ಕಾಲದ ಸಮಯದಲ್ಲಿ ನಡೆಯುತ್ತದೆ. ಸುಬಹ್ ಬಾಂಗ್‌ನ ನಂತರ

ಆ ಮನೆಯಲ್ಲಿ ಸಾಮೂಹಿಕವಾಗಿ ಸುಬಹ್ ನಮಾಜನ್ನು ಮಾಡಲಾಗುತ್ತದೆ. ನಂತರ ಮನೆಯ ಒಡತಿ ಹಾಲು ಬಿಸಿ ಮಾಡುವಳು. ಹಾಗೇ ಮುಕ್ರಿಯವರಿಂದ ಕುರಾನ್ ಪರಾಯಣ ಮತ್ತು ವಿಶೇಷ ದುಆ ನೆರವೇರುತ್ತದೆ. ಉಕ್ಕೇರಿದ ಹಾಲನ್ನು ಸೇರಿದವರಿಗೆಲ್ಲಾ ಕುಡಿಯಲು ಕೊಡಲಾಗುತ್ತದೆ. ನಂತರ ಅಕ್ಕಿಮುಡಿಯನ್ನು ಮನೆಯ ಒಳಗೆ ಕೊಂಡ್ಹೋಗಿ ಇಡುತ್ತಾರೆ.

**ಸುನ್ನತ್ ಮಂಙಳ:** ಈ ಸುನ್ನತ್ ಮಂಙಳವು ಇಸ್ಲಾಮಿ ಕರ್ಮ ಶಾಸ್ತ್ರವಾಗಿದ್ದು ಕಡ್ಡಾಯವಾದುದಾಗಿದೆ. ಗಂಡು ಮಕ್ಕಳು ಎಳೆಯ ಪ್ರಾಯದಲ್ಲಿ ಸುನ್ನತ್ ಮಂಙಳಕ್ಕೆ ಒಳಗಾಗುತ್ತಾರೆ. ಸಾಮಾನ್ಯವಾಗಿ ಹಿಂದೆ ಈ ಮದುವೆಯು ಹುಡುಗನಿಗೆ ಏಳು ವರ್ಷ ತುಂಬುವುದರೊಳಗೆ ನಡೆಯುತ್ತಿತ್ತು. ಈ ಸುನ್ನತ್ ಮಂಙಳವು ವಸನ್ (ಮುಸ್ಲಿ ಸಮುದಾಯದ ಕ್ಷೌರಿಕ)ನಿಂದ ನಡೆಯುತ್ತದೆ.

ಸಂಬಂಧಪಟ್ಟವರು ಒಂದೆರಡು ಮುಡಿ ಅಕ್ಕಿಯ ಮೇಲೆ ಹುಡುಗನನ್ನು ಕೂರಿಸುವರು. ನಂತರ ಆತನ ಮುಖವನ್ನು ಬಲ ಭಾಗಕ್ಕೆ ತಿರುಗಿಸುತ್ತಲೇ ವಸನ್ ಅಲ್ಲಾಹು–ಅಕ್ಬರ್ ಎನ್ನುತ್ತಾ ಮುಂಜಿ (ಶಿಶ್ನದ ಮುಂಭಾಗದ ಚರ್ಮವನ್ನು ಕತ್ತರಿಸುವುದು)ಮಾಡಿ ಆ ಹುಣ್ಣಿಗೆ ಬ್ಯಾಂಡೇಜ್ ಹಾಕುವನು. ಅದಲ್ಲದೆ ಈ ಚರ್ಮವನ್ನು ಬೂದಿಯಲ್ಲಿ ಬೆರೆಸಿ ತೆಂಗಿನ ಮರದ ಬುಡದಲ್ಲಿ ಹೂತು ಬಿಡಲಾಗುತ್ತದೆ. ಸುನ್ನತ್‌ಗೊಳಗಾದ ಹುಡುಗನ ಹುಣ್ಣಿಗೆ ಬಟ್ಟೆ–ಬರೆ ತಾಗದಂತೆ ಬಿಳಿ ವಸ್ತ್ರವು ಆತನ ಕತ್ತಿನ ಸುತ್ತ ಸುತ್ತಲ್ಪಟ್ಟಿರುತ್ತದೆ. ಸುನ್ನತ್‌ಗೊಳಗಾದವನ ಹುಣ್ಣನ್ನು ಮೂರು, ಐದು, ಏಳು, ಒಂಬತ್ತು ಹೀಗೆ ಒಣಗುವ ತನಕ ತೊಳೆಯಲಾಗುತ್ತಿತ್ತು.

ಮುಂಜಿಗೆ ಒಳಗಾದ ಹುಡುಗನ ಹುಣ್ಣು ಒಣಗಿದ ಕೂಡಲೆ ಮಸೀದಿಗೆ ಹೋಗಬೇಕಾಗುತ್ತದೆ. ಇದಕ್ಕೆ ಸುನ್ನತ್ ಪುದಿಯಾಂಪ್ಲೆ ಪಳ್ಳಿಗೆ ಪೋಂಡೋ ಎನ್ನುವರು. ಕೆಲವೆಡೆ ಮುಂಜಿಯಾದ ಮಕ್ಕಳನ್ನು ಮೆರವಣಿಗೆಯಲ್ಲಿ ಹಾಡುಹಾಡಿ ಸಿಡಿ ಮದ್ದುಗಳಿಂದ ಮಸೀದಿಯ ಕೊಳಕ್ಕೆ ಸ್ನಾನಕ್ಕೆ ಕರೆದೊಯ್ದು, ಮದುಮಗನಂತೆ ಸಿಂಗರಿಸಿ ಮೆರವಣಿಗೆಯಲ್ಲಿ ಮತ್ತೆ ಮನೆಗೆ ಕರೆತರುವ ಪರಿಪಾಠ ಪ್ರಾಚೀನ ಬ್ಯಾರಿಗಳಲ್ಲಿತ್ತು. ಈ ವಿಶಿಷ್ಟ ಪದ್ಧತಿ ಇಂದು ಬ್ಯಾರಿಗಳಲ್ಲಿ ಕಾಣಲು ಸಿಗುವುದು ಅಪರೂಪ. ಈಗ ಮನೆಯ ಬದಲು ಆಸ್ಪತ್ರೆಗಳಲ್ಲಿ ವಸನ್

ಬದಲಿಗೆ ವೈದ್ಯರುಗಳಿಂದ ಮುಂಜಿಮದುವೆ ಮಾಡಲಾಗುತ್ತದೆ. ವೈಜ್ಞಾನಿಕವಾಗಿ ಮುಂಜಿ ಮಾಡಿದರೆ ಮೂತ್ರಕೋಶದ ತೊಂದರೆಯಿದ್ದರೆ ಸರಿಪಡಿಸಬಹುದಾದ ಕಾರಣ ಇತ್ತೀಚಿನ ದಿನಗಳಲ್ಲಿ ಮುಂಜಿ ಮಾಡುವುದು ಬ್ಯಾರಿ ಸಮುದಾಯದಲ್ಲಿ ಮಾತ್ರವಲ್ಲದೆ ಇತರ ಸಮುದಾಯದವರು ವೈದ್ಯರ ಸಲಹೆ ಮೇರೆಗೆ ಮಾಡುತ್ತಾರೆ.

ಈ ರೀತಿ ಆಧುನಿಕ ಕಾಲದ ಬ್ಯಾರಿ ಸಮುದಾಯದ ಮದುವೆ ಮತ್ತು ಇತರ ಸಮಾರಂಭಗಳನ್ನು ನೋಡಿದಾಗ, ಪ್ರಾಚೀನ ಬ್ಯಾರಿಗಳಲ್ಲಿ ಇದ್ದಂತಹ ಸಂಪ್ರದಾಯಗಳು ಕಾಣದಾಗಿದೆ. ಇದಕ್ಕೆ ಬದಲಾಗುತ್ತಿರುವ ಸಮಾಜ ಮತ್ತು ವಿದ್ಯಾಭ್ಯಾಸ ಕಾರಣವೆನ್ನಬಹುದು. ಈ ಪ್ರಚಲಿತ ಸಮಾರಂಭಗಳು ಹಳ್ಳಿಗಳಲ್ಲಿ ಈಗಲೂ ಕಾಣಸಿಗುತ್ತದೆ.

## ೩.೩ ಉರೂಸ್

ಇಸ್ಲಾಂ ಏಕದೇವಾರಾಧನೆಯ ಒಂದು ಧರ್ಮ. ಇಲ್ಲಿ ಅಗೋಚರವಾದ ದೇವತ್ವವನ್ನಲ್ಲದೇ ಆಕಾರ, ರೂಪ, ದೇವರನ್ನು ವಿಶ್ವಾಸಿಸಲಾಗುವುದಿಲ್ಲ. ಭೂಮಿಯ ಮೇಲೆ ಇರುವ ಎಲ್ಲಾ ಸೃಷ್ಟಿಗಳು ಅದು ಅಲ್ಲಾಹನದು ಎಂಬ ಬಲವಾದ ನಂಬಿಕೆ ಮುಸ್ಲಿಂಮನ ಮೊದಲ ಶ್ರದ್ಧೆಗೆ ಸೇರಿದ್ದು, ದೇವರು ಸೃಷ್ಟಿಸಿದ ಪ್ರತಿಯೊಂದು ವಸ್ತುವೂ ಒಂದಿಲ್ಲೊಂದು ವಿಧದಿಂದ ಅವನನ್ನು ಆರಾಧಿಸುವುದಕ್ಕಾಗಿದೆ. ಈ ಆರಾಧನೆಯಲ್ಲಿ ಆತ ಕೆಲವೊಂದು ಕಠಿಣವಾದ ವಿಧಗಳನ್ನು ಸೇರಿಸಿದ್ದಾನೆ. ಇದೆಲ್ಲವನ್ನೂ ಚಾಚೂ ತಪ್ಪದೆ ಪಾಲಿಸಿ, ಕೇವಲ ಆಧ್ಯಾತ್ಮಿಕ ಭಾವನೆಯಿಂದ ಆಜ್ಞೆಗಳಿಗೆ ಚ್ಯುತಿ ಬಾರದಂತೆ ನಡೆಸಿಕೊಂಡು ಬಂದು ಹುತಾತ್ಮರಾದವರನ್ನು ಅವನ ಇಷ್ಟದಾಸರ ಸಾಲಿನಲ್ಲಿ ಸೇರಿಸಿಕೊಂಡು ಕೆಲವೊಂದು ಪ್ರತ್ಯೇಕವಾದ ಸ್ಥಾನಮಾನಗಳಿಂದ ದೇವರು ಅವರನ್ನು ಉನ್ನತ ಹಂತದಲ್ಲಿ ತಂದು ನಿಲ್ಲಿಸಿ, ಕೆಲವೊಂದು ಪವಾಡಗಳನ್ನು ಸೃಷ್ಟಿಸುವ ಶಕ್ತಿಯನ್ನು ಅವರಿಗೆ ನೀಡುತ್ತಾನೆ ಅವರನ್ನು ಇಸ್ಲಾಮಿನಲ್ಲಿ ಜೌಲಿಯಾಗಳೆಂದು ಕರೆಯುತ್ತಾರೆ. ಇಂತಹವರ ಸಮಕ್ಷಮದಲ್ಲಿ ಅವರನ್ನು ಮಧ್ಯವರ್ತಿಗಳನ್ನಾಗಿರಿಸಿ ದೇವರಲ್ಲಿ ತಮ್ಮ ಇಷ್ಟಸಿದ್ಧಿಗಾಗಿ ಉತ್ಸವದ ರೀತಿಯಲ್ಲಿ ಎಲ್ಲರೂ ಒಂದು ಸೇರಿ ಸಾಮೂಹಿಕ ಪ್ರಾರ್ಥನೆ ನೆರವೇರಿಸುವುದನ್ನು 'ಉರೂಸ್' ಎಂದು ಕರೆಯಲಾಗುತ್ತದೆ[೨೧].

'ಉರೂಸ್'ಬ್ಯಾರಿ ಸಮುದಾಯದವರು ಆಚರಿಸುವ ಧಾರ್ಮಿಕ ಹಬ್ಬವಾಗಿದೆ[೨೨]. ನಮ್ಮ ದೃಷ್ಟಿಯಿಂದ ಔಲಿಯಾಗಳು ಮರಣಹೊಂದಿ ಅಂತ್ಯವಿಶ್ರಮಗೊಂಡ ಸ್ಥಳಗಳಿಗೆ ತೆರಳಿ ಸಾಮೂಹಿಕ ಪ್ರಾರ್ಥನೆ, ಪಾರಾಯಣಗಳನ್ನು ಗೈದು ಔಲಿಯಾಗಳನ್ನು ಮಾಧ್ಯಮ ಮತ್ತು ಮಧ್ಯವರ್ತಿಯಾಗಿಸಿ ದುವಾಗೈದಾಗ ಇಷ್ಟಾರ್ಥಗಳು ಸಿದ್ಧಿಸುವುದು ಎಂಬುದು ಒಂದು ಬಲವಾದ ನಂಬಿಕೆ.

ದರ್ಗಾದಲ್ಲಿ ದೇವರ ಇಷ್ಟದಾಸರು ಅಂದರೆ ಔಲಿಯಾರನ್ನು ದಫನ ಮಾಡಿದ್ದಾರೆ. ಆ ಗೋರಿಯ ಮೇಲೆ ಹಸಿರು ಚಾದರ ಹೊದಿಸಿ ಹೂವನ್ನು ಹಾಕುತ್ತಾರೆ ಮತ್ತು ದೀಪವನ್ನು ಬೆಳಗಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉಳ್ಳಾಲದ, ಹಂಪನಕಟ್ಟೆಯ, ಮುಕ್ಕಾದ ಮತ್ತು ಮುಲ್ಕಿಯ ದರ್ಗಾಗಳ ಉರೂಸು ತುಂಬಾ ಪ್ರಸಿದ್ಧವಾಗಿದೆ.

ಉರೂಸ್ ಹಬ್ಬವನ್ನು ಅತಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಜನರು ಜಾತಿ, ಮತ ಭೇದವಿಲ್ಲದೆ ಒಂದಾಗುತ್ತಾರೆ. ಎಷ್ಟು ಮತಭೇದವಿದ್ದರೂ ಈ ಸಂದರ್ಭದಲ್ಲಿ ಎಲ್ಲವನ್ನು ಮರೆತು ಒಂದಾಗಿ ಪ್ರಾರ್ಥನೆಯನ್ನು ಸಲ್ಲಿಸಿ ಹರಕೆಯ ರೂಪದಲ್ಲಿ ದರ್ಗಾಕ್ಕೆ ಕಾಣಿಕೆಯನ್ನು ನೀಡುತ್ತಾರೆ. ಇದು ಒಂದು ಜಾತ್ರೆಯೂ ಹೌದು.

'ಉರೂಸ್' ಬೇರೆ ಬೇರೆ ಪ್ರದೇಶದಲ್ಲಿ ಬೇರೆ ಬೇರೆ ರೀತಿಯಲ್ಲಿ ಆಚರಿಸುತ್ತಾರೆ. ದೊಡ್ಡ ದರ್ಗಾದಲ್ಲಿ 'ಉರೂಸ್' ಐದು ವರ್ಷಕೊಮ್ಮೆ ಮತ್ತು ಸಣ್ಣ ದರ್ಗಾದಲ್ಲಿ ವರ್ಷಕೊಮ್ಮೆ ಆಚರಿಸುತ್ತಾರೆ. ಉಳ್ಳಾಲದ ಉರೂಸುಗಳಲ್ಲಿ ಹಿಂದೂ ಮುಸ್ಲಿಮರು ದೊಡ್ಡ ಸಂಖ್ಯೆಯಲ್ಲಿ ಭಾಗವಹಿಸುತ್ತಾರೆ. ಉರೂಸ್ ಎಂಬುದು ಭಾರತೀಯ ಪರಂಪರೆಯಲ್ಲಿ ಹಿಂದೂ ಮುಸ್ಲಿಂ ಸಂಸ್ಕೃತಿಯ ಏಕತೆಯ ಸಂಕೇತವೂ ಹೌದು. ಈಗಿನ ಕಾಲದಲ್ಲಿ ಬ್ಯಾರಿ ಸಮುದಾಯದ ಕೆಲವರಿಗೆ 'ಉರೂಸ್'ಹಬ್ಬದ ಮೇಲೆ ನಂಬಿಕೆ ಕಡಿಮೆಯಾಗಿದೆ. ಅವರ ಪ್ರಕಾರ ಔಲಿಯಗಳು ನಮ್ಮ ಹಾಗೆ ಮನುಷ್ಯರು ಅವರು ನಮ್ಮ ಇಚ್ಛೆಗಳನ್ನು ಹೇಗೆ ಪೂರೈಸಲು ಸಾಧ್ಯ. ದೇವರು (ಅಲ್ಲಾಹು) ನಮ್ಮ ಇಚ್ಛೆಯನ್ನು ಪೂರೈಸುವವ, ಆದುದರಿಂದ ಅವರ ಮೇಲೆ ನಂಬಿಕೆ

ಇಟ್ಟು ಪೂಜಿಸುವುದು ತಪ್ಪು. ಇನ್ನೂ ಕೆಲವು ವರ್ಷಗಳ ನಂತರ 'ಉರೂಸ್' ಆಚರಣೆಯೂ ಕಡಿಮೆಯಾಗಬಹುದು.

**ಮೌಲೂದ್:** ಮೌಲೂದ್ ಮಜ್ಲಿಸ್ ಒಂದು ಬರಕತ್ ತುಂಬಿದ ಸಭೆ. ಅದರಲ್ಲಿ ಭಾಗವಹಿಸಿ ಬರಕತ್, ಸಲಾತ್, ದುಆ, ಕುರಾನ್ ಪಾರಾಯಣ ಮುಂತಾದವುಗಳ ಫಲ ಪಡೆದು ಭಕ್ತಿ, ಭಾವುಕತೆ ಪ್ರವಾದಿ ಪ್ರೇಮದ ಮಾಧುರ್ಯವನ್ನು ಮನದಲ್ಲಿ ತುಂಬುವುದು ಮೌಲೂದ್‌ನ ನಿಜವಾದ ಉದ್ದೇಶ. ನೆಲದಲ್ಲಿ ಚಾಪೆ ಹಾಸಿ ಅದರ ಮೇಲೆ ಬಟ್ಟೆ ಹಾಕಿ ಶಿಸ್ತಿನಿಂದ ಕೂತು ನಡೆಸುವುದು ಇದರ ರೂಢಿ. ಆದರೆ ಇದೆಲ್ಲ ಈಗ ಮಾಯವಾಗ ತೊಡಗಿದೆ. ಕುರ್ಚಿ ಟೇಬಲ್ ಮೇಲೆ ಊಟಕ್ಕೆ ಕೂತಂತಹ ಭಂಗಿಯಲ್ಲಿ ಕೂತು ಕಾಟಾಚಾರಕ್ಕೆಂಬಂತೆ ಓದುವ ಕ್ರಮ ಈಗೀಗ ರೂಢಿಯಾಗಿದೆ. ಮೈಲಾರ್‌ಗಳು ಬಂದು ಓದಿ ಹೋಗುವುದು ಉಳಿದವರು ಊಟದ ಸಮಯದಲ್ಲಿ ಬಂದು ಊಟ ಮಾಡಿ ಹೋಗುವುದು ಇಂದಿನ ರೂಢಿ.

### ೩.೪ ಮೂಢನಂಬಿಕೆಗಳು

ಬ್ಯಾರಿಗಳು ಮೂಢನಂಬಿಕೆಯಲ್ಲಿ ಆಳವಾದ ನಂಬಿಕೆ ತಾಳುತ್ತಾರೆ. ತುಳುನಾಡು ಭೂತಾರಾಧನೆಗೆ ಮಹತ್ವವನ್ನು ನೀಡುವ ನಾಡಾಗಿದೆ. ಹೆಚ್ಚಿನ ಜನರು ಭೂತಾರಾಧನೆಯಲ್ಲಿ ನಂಬಿಕೆಯನ್ನು ಇಟ್ಟಿದ್ದಾರೆ. ಬ್ಯಾರಿಗಳಿಗೂ ಭೂತಾರಾಧನೆಯಲ್ಲಿ ನಂಬಿಕೆಯಿದೆ.ಕುರಾನಿನಲ್ಲಿ ಭೂತಾರಾಧನೆಗೆ ಯಾವ ಸ್ಥಾನವೂ ಇಲ್ಲ[೨೩]. ಆದರೆ ಬ್ಯಾರಿಗಳಲ್ಲಿ ಗರ್ಭಿಣಿ ಮಹಿಳೆ, ಮತ್ತು ಮಕ್ಕಳು ಒಬ್ಬರೇ ಹೊರಗೆ ಹೋಗಬಾರದೆಂಬ ಮೂಢನಂಬಿಕೆಯಿದೆ. ಬ್ಯಾರಿ ಹೆಣ್ಣು ಮಕ್ಕಳು ವಿಚಿತ್ರವಾಗಿ ವರ್ತಿಸಿದರೆ ಅವಳ ಮೈಮೇಲೆ ಸೈತಾನ್ ಆವಾಹನೆಯಾಗಿದೆ ಎಂದು ಮಂತ್ರವಾದಿಯನ್ನು ಕರೆದು ಮಂತ್ರ ಮಾಡಿಸುತ್ತಾರೆ. ಕೆಲವೊಮ್ಮೆ ಇದಕ್ಕೂ ಜಗ್ಗದಿದ್ದರೆ ಮ್ಯೊಲಾರರು ಬೆತ್ತದಿಂದ ಮೈಮೇಲೆ ಬಂದವರಿಗೆ ಒಂದೇ ಸಮನೆ ಹೊಡೆಯುವುದು ರೂಢಿಯಲ್ಲಿದೆ.

ಇನ್ನು ಕೆಲವರು ಮಾಟ ಮಂತ್ರದಲ್ಲಿ ನಂಬಿಕೆಯುಳ್ಳವರು. ಮಾಟಮಾಡಲು ಮಾಂತ್ರಿಕನ ಸಹಾಯ ಪಡೆದು ಮಾಟ ಮಾಡಿ ಇನ್ನೊಬ್ಬರ ಜೀವನವನ್ನು ಹಾಳುಮಾಡುತ್ತಾರೆ. ಜ್ವರ

ಬಂದಾಗ ಹೊಯಿಗೆ ಬಿಸಾಡಿದ್ದು ಎಂದು ನಂಬಿ ಅದನ್ನು ಹೋಗಲಾಡಿಸಲು ವಿಶೇಷ ಪದ್ದತಿಯನ್ನು ಬಳಸುತ್ತಾರೆ. ಮೈಲಾಂಜಿಯ ಎಲೆಯನ್ನು ಬಿಸಿ ನೀರಿನಲ್ಲಿ ಹಾಕಿ ನಂತರ ಅದನ್ನು ಜ್ವರಭಾದಿಸಿದಾತನ ಮೈಗೆ ತಿಕ್ಕಲಾಗುತ್ತದೆ. ಆವಾಗ ಅವನ ಕಾಲಡಿಯಲ್ಲಿ ಹಿಡಿಸೂಡಿ ಮತ್ತು ಮುಂಭಾಗದಲ್ಲಿ ತಡ್ಪೆಯನ್ನು ಇಡಲಾಗುತ್ತದೆ. ಎಲೆಯಿಂದ ರೋಗಿಯ ಮೈಗೆ ತಿಕ್ಕಿದ ನಂತರ ಆ ಎಲೆಯನ್ನು ತಡ್ಪೆಗೆ ಹಾಕಲಾಗುತ್ತದೆ. ಹಾಗೇ ಮೈಯಲ್ಲಿದ್ದ ಹೊಗೆ ತಡ್ಪೆಯಲ್ಲಿ ಸಂಗ್ರಹವಾಗುತ್ತದೆ ಎಂಬ ನಂಬಿಕೆ ಬ್ಯಾರಿಗಳಿಗಿದ್ದು ಇದಕ್ಕೆ ಪೊಯ್ಯೆಎಡ್ಕ್‌ರೆ ಎಂದು ಕರೆಯುತ್ತಾರೆ.

ಅದೇ ರೀತಿ ಸಣ್ಣ ಮಗು ವಿಪರೀತವಾಗಿ ಅತ್ತಾಗ ಬೆಲ್ಲುಕಲ್ಲನ್ನು ಬೆಂಕಿಯಲ್ಲಿ ಹಾಕಿ ಚೆನ್ನಾಗಿ ಬಿಸಿ ಮಾಡಿ ನಂತರ ಕುಂಡವೊಂದಕ್ಕೆ ಬೆಂಕಿ ಮತ್ತು ಬೆಲ್ಲು ಕಲ್ಲನ್ನು ಹಾಕಿ ಮಗುವಿನ ತಲೆಗೆ ಮೂರುಬಾರಿ ಸುತ್ತಿ ಹೊಗೆ ಬರುವಂತೆ ಮಾಡಲಾಗುತ್ತದೆ. ಅಲ್ಲದೆ ಕೆಲವೊಮ್ಮೆ ಮಕ್ಕಳ ಸ್ನಾನದ ನೀರಿಗೆ ಕಾಯಿಸಿದ ಬೆಲ್ಲುಕಲ್ಲನು ಹಾಕಲಾಗುತ್ತದೆ. ಇದಕ್ಕೆ 'ಪೊಗೆ ಕಾಟ್‌ರೆ' ಎನ್ನಲಾಗುತ್ತದೆ. ಹೀಗೆ ಮಾಡಿದಾಗ ಮಗುವಿನ ಅಳು ನಿಲ್ಲುತ್ತದೆ ಎಂಬ ನಂಬಿಕೆ ಬ್ಯಾರಿಗಳಿಗಿದೆ[೨೪].

ಅದಲ್ಲದೆ ಹಿಡಿತವಿಲ್ಲದ ರೋಗದ ಶಮನಕ್ಕಾಗಿ ರೋಗಿಯ ಗಮನಕ್ಕೆ ತಾರದೇ ಕಾವಲಿಗೆ ಬಳಸುವ 'ಚಟ್ಂಜ' ವನ್ನು 'ಚುಟ್ಟು ಬೈಕಲ್' ಎನ್ನಲಾಗುತ್ತದೆ. ಈಪದ್ಧತಿಯಿಂದ ಹಿಡಿತವಿಲ್ಲದ ರೋಗಿಯ ನೋವು ಶಮನವಾಗುತ್ತದೆ ಎಂಬ ನಂಬಿಕೆ ಬ್ಯಾರಿಗಳಿಗಿತ್ತು. ಅಲ್ಲದೆ ದೃಷ್ಟಿ ಬಿದ್ದರೆ ಅದನ್ನು ಹೋಗಲಾಡಿಸಲು ಬ್ಯಾರಿಗಳು ಒಂದು ಕ್ರಮವನ್ನು ಮಾಡುತ್ತಿದ್ದರು. ದೃಷ್ಟಿ ತಾಗಿದ ವ್ಯಕ್ತಿಯನ್ನು ಮಣ್ಣಿನ ಮಡಕೆಯ ಮೇಲೆ ಕತ್ತಲಲ್ಲಿ ಕೂತುಕೊಳಿಸಿ, ತೆಂಗಿನೆಣ್ಣೆ ಬಳಸಿದ ಸೂಟೆಯನ್ನು ಆತನ ಮುಖ, ತಲೆಯ ಸುತ್ತ ತಿರುಗಿಸಲಾಗುತ್ತದೆ. ವ್ಯಕ್ತಿಯ ಮನಸ್ಸು ಸೂಟೆಯತ್ತ ಕೇಂದ್ರೀಕೃತಗೊಂಡಿರುವ ಸಮಯವನ್ನು ಗಮನಿಸಿ, ಆತ ಕೂತಿರುವ ಮಡಕೆಗೆ ಆತನ ಗಮನಕ್ಕೆ ತಾರದೆ ಮರದ ದೊಣ್ಣೆಯಿಂದ ಬಲವಾಗಿ ಹೊಡೆಯಲಾಗುತ್ತದೆ. ಮಡಕೆ ಹುಡಿಹುಡಿಯಾಗುತ್ತದೆಯಲ್ಲದೆ, ಅದರ ಮೇಲೆ ಕುಳಿತ ವ್ಯಕ್ತಿ ಕೆಳಗುರುಳಿ ಬೀಳುತ್ತಾನೆ. ಆವಾಗ

ಅವನ ಹೆದರಿಕೆ ದೂರವಾಗಿ ಬಿದ್ದ ದೃಷ್ಟಿ ಕೂಡ ದೂರವಾಗುತ್ತದೆ. ಎಂಬ ನಂಬಿಕೆಯೂ ಬ್ಯಾರಿಗಳಲ್ಲಿತ್ತು. ಇದಕ್ಕೆ 'ಕಣ್ಣೀರ್ ಎಡ್ಕಲ್' ಎಂದು ಕರೆಯುತ್ತಿದ್ದರು. 'ಕೊದಿ ಎಡ್ಕಲ್' ಎಂಬ ಆಚರಣೆಯೂ ಬ್ಯಾರಿಗಳಲ್ಲಿತ್ತು. ವ್ಯಕ್ತಿಗೆ ಅಜೀರ್ಣ ಉಂಟಾದಲ್ಲಿ ಅದನ್ನು ದೂರ ಮಾಡುವುದು ಇದರ ಉದ್ದೇಶವಾಗಿತ್ತು. ವ್ಯಕ್ತಿಯನ್ನು ಹಿಡಿಸೂಡಿಯ ಮೇಲೆ ನಿಲ್ಲಿಸಿ, ಆತನ ಮುಂದೆ ಕೆಂಡವೊಂದನ್ನಿಟ್ಟು ಅದರಲ್ಲಿ ಮುಳಿಹುಲ್ಲನ್ನು ಸುಡಲಾಗುತ್ತದೆ. ಅಲ್ಲದೆ ಬೆಳ್ತಿಗೆ, ಇದ್ದಿಲು, ಮೆಣಸು, ಉಪ್ಪನ್ನು ಬಟ್ಟೆಯ ತುಂಡಿನಲ್ಲಿ ಕಟ್ಟಿಹಾಕಿ ಕೊಡಕ್ಕೆ ಹಾಕಲಾಗುತ್ತದೆ. ನಂತರ ಒಂದು ಪ್ರಾತೆಯಲ್ಲಿ ನೀರು ತುಂಬಿಸಿ, ಮುಳಿಹುಲ್ಲು ಸುಡುತ್ತಿದ್ದ ಕೊಡವನ್ನು ಕವುಚಿ ಹಾಕಬೇಕಾಗುತ್ತದೆ. ಆವಾಗ ಆ ವ್ಯಕ್ತಿಯ ಅಜೀರ್ಣ ದೂರವಾಗುತ್ತದೆ ಎಂಬ ನಂಬಿಕೆ ಬ್ಯಾರಿಗಳಲ್ಲಿತ್ತು. ದಕ್ಷಿಣೆ ಕೊಡುವುದು ಕೂಡಾ ಬ್ಯಾರಿಗಳಲ್ಲಿ ಕಂಡುಬರುವ ವಿಶಿಷ್ಟ ಸಂಪ್ರದಾಯವಾಗಿದೆ. ಬ್ಯಾರಿ ಹಿರಿಯರು ಚಿಕ್ಕ ಮಕ್ಕಳನ್ನು ಪ್ರಥಮ ಬಾರಿಗೆ ಸಂಧಿಸಿದಾಗ, ಅಥವಾ ಕುಟುಂಬದ ಮನೆಯೊಂದಕ್ಕೆ ಹೋದಾಗ ಅಲ್ಲಿನ ಎಳೆಯ ಮಕ್ಕಳಿಗೆ ಹಣವನ್ನು ಕೊಡುತ್ತಾರೆ. ಇದಕ್ಕೆ 'ಕೈ ಮಡ್‌ಕ್‌ಡೆ' ಎಂದು ಕರೆಯಲಾಗುತ್ತದೆ. ಈ ಆಚರಣೆ ಕೊಡವರಲ್ಲೂ ಇದೆ. ಉಸ್ತಾದರುಗಳಿಗೆ ಕೊಡುವ ಗೌರವಧನಗಳಿಗೂ 'ಕೈಮಡ್‌ಕ್‌ಡೆ' ಎಂದು ಕರೆಯುತ್ತಾರೆ. ಪ್ರಾಚೀನ ಕಾಲದಲ್ಲಿ ದುಡಿದು ಮನೆ ಸೇರುವ ಬ್ಯಾರಿ ಪುರುಷ ದಣಿವಾರಿಸಲು ವಿವಿಧ ಮನೋರಂಜನೆ ಕಾರ್ಯಕ್ರಮದಲ್ಲಿ ತೊಡಗಿಸಿಕೊಳ್ಳುತ್ತಿದ್ದ. ಇದು ಕೇವಲ ಮನೋರಂಜನೆ ಮಾತ್ರವಲ್ಲ, ಆದಾಯದ ಮೂಲವೂ ಹೌದು. ಹಿಂದೆ ನೆರೆಬಂದಾಗ ನದಿ ಸಮೀಪದ ತೋಡು ಗದ್ದೆಗಳಿಗೆ ನೀರು ಬರುತ್ತಿದ್ದು, ಆವಾಗ ನದಿಯಿಂದ ಮೇಲೇರಿ ಬಂದ ಮೀನು ತೋಡು ಗದ್ದೆಗಳಲ್ಲಿ ಕಾಣಲು ಸಿಗುತ್ತದೆ. ಅದನ್ನು ಹಿಡಿಯುವುದಕ್ಕೆ 'ಉಬರ್ ಕೊತ್ತುರೋ' ಎನ್ನಲಾಗುತ್ತದೆ. ಇದೂ ಕೂಡಾ ಒಂದು ವಿಶಿಷ್ಟ ಕಲೆಯಾಗಿದೆ. ಇದನ್ನು ಹಿಡಿಯಲು ತನ್ನದೇ ಆದ ಕೈಚಳಕ ತೋರಿಸಬೇಕಾಗುತ್ತದೆ. ಅದಲ್ಲದೆ ಬೆಳದಿಂಗಳ ರಾತ್ರಿ 'ಮುಂಡಿರೆ ದಂಡ್' ಅಥವಾ ಬೊಪ್ಪಂಕಾಯಿ ದಂಡ್‌ಗೆ ಬಟ್ಟೆ ಕಟ್ಟಿ ಎಣ್ಣೆ ಸುರಿದ ಚೂಟೆ

ಮಾಡಿ ಮೀನು ಹಿಡಿಯಲು ಹೋಗುತ್ತಿದ್ದರು. ಇದಕ್ಕೆ 'ಚೂಟೆ ಪಿಡಿಕ್‌ರೆ' ಅಥವ 'ಲೈಟ್‌ಗೆ ಪೋಂಡೆ' ಎಂದು ಕರೆಯಲಾಗುತ್ತದೆ. ಈ ರೀತಿ ಹಲವಾರು ಮೂಢನಂಬಿಕೆಗಳು ಮತ್ತು ಆಚರಣೆ ಬ್ಯಾರಿಗಳಲ್ಲಿ ಈಗಲೂ ಬಳಕೆಯಲ್ಲಿದೆ.

### ೩.೫ ಜನರ ಪ್ರತಿಕ್ರಿಯೆ/ಸ್ಪಂದನ

ಈ ಅಧ್ಯಯನದಲ್ಲಿ ತಿಳಿಸಲಾದ ಎಲ್ಲಾ ವಿಚಾರಗಳ ಬಗ್ಗೆ, ಜನರೊಡನೆ ಸ್ಪಂದಿಸಿ ಅವರ ಪ್ರತಿಕ್ರಿಯೆ ಕೇಳಿದಾಗ, ಅರವತ್ತು ವರ್ಷದ ಉಮರಬ್ಬ ತಲಪಾಡಿಯವರು, ಕುರಾನಿನ ಪ್ರಕಾರ ಬ್ಯಾರಿಗಳು ಆಚರಿಸಬೇಕಾದ ಹಬ್ಬಗಳು ಎರಡೇ ಪೆರ್ನಾಲ್ ಮತ್ತು ಬಕ್ರೀದ್. ತುಳುನಾಡಿನ ಹಿಂದುಗಳ ಸಂಪ್ರದಾಯದಿಂದ, ಉಳಿದ ಹಬ್ಬಗಳು ಆಚರಣೆಗೆ ಬಂದಿದೆ. ಉದಾ;–ಮೊಹರಂ ಹಬ್ಬವನ್ನು ಆಚರಣೆ ಮಾಡುತ್ತಿದ್ದಾಗ, ವಿವಿಧ ವೇಷಗಳ ಮೆರವಣಿಗೆ ಮಾಡುತ್ತಿದ್ದರು. ಅದನ್ನು ಮತ್ತು ದಸರಾ ಹಬ್ಬದ ವೇಷಗಳನ್ನು ನೋಡಿದಾಗ, ಯಾವುದೇ ವ್ಯತ್ಯಾಸ ಕಾಣುವುದಿಲ್ಲ. ಆಚರಣೆ ಬೇರೆ ಬೇರೆ ರೀತಿಯಲ್ಲಿ ಮಾಡಬಹುದು ಆದರೆ ಈ ಹಬ್ಬದ ಆಚರಣೆಯಲ್ಲಿ ತುಳುನಾಡಿನ ಸಂಸ್ಕ ತಿ ಹಾಸು ಹೊಕ್ಕಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಬ್ಯಾರಿಗಳು ಮೊಹರಂ ಆಚರಣೆ ಕೈಬಿಟ್ಟಿದ್ದಾರೆ. ಹೆಸರಿಗೆ ಮಾತ್ರ ಮೊಹರಂ ಆಚರಣೆ ಮಾಡುತ್ತಾರೆ. ಮೊದಲು ಮಾಡುತ್ತಿದ್ದ ಆಚರಣೆಯು ಈಗ ಇಲ್ಲ. ಇತರ ಹಬ್ಬಗಳ ಆಚರಣೆ ಸರಿಯಲ್ಲ ಎಂಬುದು ಇವರ ಅಭಿಪ್ರಾಯ ಮದುವೆ ಸಮಾರಂಭದ ಬಗ್ಗೆ ಎಪ್ಪತ್ತು ವರ್ಷದ ಕಂಕನಾಡಿಯ ಇದಿನಬ್ಬರೊಡನೆ ಕೇಳಿದಾಗ, ಬ್ಯಾರಿಗಳ ಮದುವೆ ಸಮಾರಂಭವು ಹಿಂದಿನ ಕಾಲದಲ್ಲಿ ಎರಡು ವಾರಗಳ ತನಕ ಮುಂದುವರಿಯುತ್ತಿತ್ತು. ಮದುವೆ ಬಂತೆಂದರೆ ಬ್ಯಾರಿ ಕುಟುಂಬದ ಎಲ್ಲ ಸದಸ್ಯರು ಬಹಳ ಸಂಭ್ರಮದಿಂದ ಮದುವೆಯ ಸಮಾರಂಭದಲ್ಲಿ ತಮ್ಮನ್ನು ತಾವೇ ತೊಡಗಿಸಿ ಕೊಳ್ಳುತ್ತಿದ್ದರು. ಕುಟುಂಬದ ಸದಸ್ಯರೆಲ್ಲರೂ ಒಂದು ವಾರದ ಮೊದಲೇ ಸಂಸಾರ ಸಮೇತರಾಗಿ ಒಂದು ಮದುವೆ ಮನೆಯಲ್ಲಿ ತಂಗಿರುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಮದುವೆ ಸಮಾರಂಭ ಮನೆಯ ಬದಲಾಗಿ ಹಾಲ್‌ಗಳಲ್ಲಿ ಮಾಡಲಾಗುತ್ತದೆ. ಅದೇ ರೀತಿ ಎರಡು ವಾರಗಳ ತನಕ ಮಾಡಲಾಗುತ್ತಿದ್ದ ಬ್ಯಾರಿ ಮದುವೆಗಳು ಒಂದು ಅಥವಾ ಎರಡೇ ದಿನಗಳಲ್ಲಿ

ಮುಗಿಯುತ್ತದೆ. ಮದುವೆ ಮನೆಯಲ್ಲಿಯೂ ಅವರ ಕುಟುಂಬದವರು ಸಂಸಾರ ಸಮೇತರಾಗಿ ಮನೆಗೆ ಬರದೆ ಹಾಲ್‌ಗೆ ಬಂದು ಸಮಾರಂಭ ಮುಗಿಸಿ ಅವರ ಮನೆಗೆ ತೆರಳುತ್ತಾರೆ. ಈಗಿನ ಮದುವೆ ಮನೆಗೂ, ಮರಣದ ಮನೆಗೂ ಒಂದೇ ವ್ಯತ್ಯಾಸವಿದೆ. ಅದೇನೆಂದರೆ, ಮದುವೆ ಮನೆ ಸಡಗರದಿಂದ ಕೂಡಿರುತ್ತದೆ. ಮರಣದ ಮನೆ ದುಃಖದಿಂದ ತುಂಬಿರುತ್ತದೆ. ಹಿಂದಿನ ಕಾಲದ ಮ್ಯೊಲಾಂಜಿ ಆಚರಣೆಗೂ ಈಗಿನ ಮ್ಯೊಲಾಂಜಿ ಆಚರಣೆಗೂ ಇರುವ ವ್ಯತ್ಯಾಸದ ಪ್ರಸ್ತಾವನೆ ಮಾಡಲು ಹೇಳಿದಾಗ ಎಪ್ಪತ್ತು ವರ್ಷದ ಜೋಹರ ಬಹಳ ದುಃಖದಿಂದ,ಎಲ್ಲಾ ಆಚರಣೆಗೂ ಕೊನೆಯಾಗುತ್ತಿದೆ.ಹಿಂದಿನ ಕಾಲದಲ್ಲಿ ಮದುವೆಯ ಮುಂದಿನ ದಿನ ಮದುಮಗಳ ಕೈಗಳು ಮೆಹಂದಿಯಿಂದ ಕಂಗೊಳಿಸುತ್ತದೆ. ಮೆಹಂದಿ ಇಡುವಾಗ, ಊರಿನ ಹಿರಿಯ ಮಹಿಳೆಯರೆಲ್ಲಾ ಸೇರಿ ಮೈಲಾಂಜಿ ಹಾಡು ಹೇಳಿ ಮೆಹಂದಿ ಇಡಲಾಗುತ್ತದೆ. ಆದರೆ ಈಗ ಸಂಬಂಧಿಕರನ್ನು ಹೆಸರಿಗೆ ಮಾತ್ರ ಕರೆದು, ಮ್ಯೊಲಾಂಜಿ ಊಟವನ್ನು ಕೊಡುತ್ತಾರೆ. ಬ್ಯೂಟಿ ಪಾರ್ಲರ್‌ನವರು ಬಂದು ಮೆಹಂದಿ ಇಡುವಾಗ ಸಂಬಂಧಿಕರು ಬಂದು ಮೆಹಂದಿ ಕೈಯನ್ನು ನೋಡಿ ಊಟ ಮಾಡಿ ತಮ್ಮ ಮನೆಗೆ ಹಿಂತಿರುಗುತ್ತಾರೆ. ಆ ಪ್ರಾಚೀನ ದಿನದ ಮ್ಯೊಲಾಂಜಿ ಹಾಡುಗಳು, ನಗು, ನಲಿವು ಎಲ್ಲವು ಮಾಯವಾಗಿದೆ. ಬ್ಯಾರಿ ಸಮೂದಾಯದ ಇತರ ಆಚರಣೆಗಳಾದ, ಮುಂಜಿಮದುವೆ, ಕಾವ್ ಕುತ್ತುರೆ, ಅವ ಒಕ್ಕಲು, ಬುಲಾಕ್ ಮಂಗಿಲ ಹಿಂದಿನಕಾಲದಲ್ಲಿ ಊರಿನ ಎಲ್ಲರನ್ನೂ ಕರೆದು ಬಹಳ ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಆದರೆ ಈಗ ಈ ಎಲ್ಲ ಸಮಾರಂಭಗಳನ್ನು ಕೈಬಿಡಲಾಗಿದೆ. ಹಿಂದಿನ ಜನರು ಶ್ರೀಮಂತರಲ್ಲದಿದ್ದರೂ, ಜಾತಿ ಮತವನ್ನು ಮರೆತು ಎಲ್ಲರೂ ಪಾಲ್ಗೊಳ್ಳುವಂತೆ ಮಾಡುವ ಹಂಬಲ ಜನರದು. ಆದರೆ ಈಗ ಮಗುಹುಟ್ಟಿದಾಗಲೇ ಆಸ್ಪತ್ರೆಯಲ್ಲಿ ಮುಂಜಿಮಾಡಲಾಗುತ್ತದೆ. ಹೆಣ್ಣು ಮಗಳು ದೊಡ್ಡವಳಾದಾಗ ಯಾರಿಗೂ ತಿಳಿಸುವುದಿಲ್ಲ. ಮನೆ ಒಕ್ಕಲಿಗೆ ಇತರ ಕೆಲವು ಜನರನ್ನು ಮಾತ್ರ ಕರೆಯಲಾಗುತ್ತದೆ. ಇನ್ನು ಕೆಲವು ವರ್ಷಗಳಾದಾಗ, ಈ ಆಚರಣೆಗಳ ಹೆಸರು ಬ್ಯಾರಿಗಳಿಗೆ ಮರೆತುಹೋಗುಬಹುದೆನ್ನುವ ಅಭಿಮತ ಅರವತ್ತು ವರ್ಷದ ಬಿ.ಫಾತಿಮಾ ಕುಲಾಯಿಯವರದು. ಉರೂಸ್ ಆಚರಣೆ ಈಗಲೂ ಮಾಡಲಾಗುತ್ತದೆ. ಆದರೆ ಹಿಂದಿನ ಉರೂಸ್‌ಗೂ ಈಗಿನ ಉರೂಸ್ ಆಚರಣೆಗೂ ಇರುವ ವ್ಯತ್ಯಾಸ, ಹಿಂದೆ ಜಾತಿ ಭೇಧ ಮರೆತು, ಹಿಂದೂ, ಮುಸ್ಲಿಂ

ಒಟ್ಟಿಗೆ ಸೇರುವಂತೆ ಮಾಡುತ್ತದೆ. ಬ್ಯಾರಿ ಸಮುದಾಯದವರೆಲ್ಲಾ ಬಂದು ತಮ್ಮ ಕಾಣಿಕೆಗಳನ್ನು ದರ್ಗಾಕ್ಕೆ ನೀಡುತ್ತಿದ್ದರು. ಆದರೆ ಈಗ ಬ್ಯಾರಿ ಸಮುದಾಯದ ಕೆಲವರೇ ಊರೂಸ್ ಆಚರಣೆಗೆ ಬರುತ್ತಾರೆ. ಜನರು ವಿದ್ಯಾವಂತರಾದ ಹಾಗೆ ಊರೂಸ್ ಆಚರಣೆ ಮೂಢನಂಬಿಕೆ ಎಂಬುದು ಕೆಲವರ ಅಭಿಪ್ರಾಯ. ಇದು ಕೋಮು ಸೌಹಾರ್ದಕ್ಕೆ ಕಾರಣವಾದ ಒಂದು ಆಚರಣೆ, ಅದೂ ಕೂಡಾ ಇನ್ನು ಕೆಲವು ವರ್ಷಗಳ ನಂತರ ನಿಲ್ಲಲೂ ಬಹುದು ಎಂದು ಅಭಿಪ್ರಾಯ ಕೊಟ್ಟವರು ಸುಳ್ಯೆ ಹಳೆಯಂಗಡಿಯವರು. ಜಮಾತುಲ್ ಇಸ್ಲಾಂನವರು ಕರಾನಿನಲ್ಲಿ ಉರೂಸ್ ಆಚರಣೆಗೆ ಯಾವುದೇ ಸ್ನಾನವಿಲ್ಲ. ಯಾಕೆಂದರೆ ನಮ್ಮ ಯಾವುದೆ ಬೇಡಿಕೆಯನ್ನು ಪೂರೈಸಲು ಮಧ್ಯವರ್ತಿಗಳು ಬೇಕಾಗಿಲ್ಲ. ಅಲ್ಲಾಹುವೇ ನಮ್ಮ ಬೇಡಿಕೆಗಳನ್ನು ಪೂರೈಸುತ್ತಾನೆ ಎಂದು ಹೇಳಿದರು. ಇವರು ಮದುವೆ ಸಮಾರಂಭವು ಬಹಳ ಸರಳವಾಗಿ ಆಚರಿಸುತ್ತಾರೆ. ಮದುವೆ ಹೆಸರಿನಲ್ಲಿ ಹಣ ಪೋಲು ಮಾಡುವುದನ್ನು ವಿರೋಧಿಸುತ್ತಾರೆ. ಅಷ್ಟೇ ಅಲ್ಲದೆ.ವರದಕ್ಷಿಣೆ ಕೊಡದೆ, ಸರಳವಾಗಿ ಪಳ್ಳಿಯಲ್ಲಿ ಮದುವೆ ಮಾಡುವದೇ ಇಸ್ಲಾಂ ಧರ್ಮದ ಮೂಲ ಉದ್ದೇಶ ಎನ್ನುತ್ತಾರೆ.

ಬ್ಯಾರಿ ಹಬ್ಬಗಳಲ್ಲಿ ವ್ಯಕ್ತಿಪೂಜೆಯ ಲವಲೇಶವೂ ಕಾಣುವುದಿಲ್ಲ. ಧಾರ್ಮಿಕ ನೆಲೆಯಲ್ಲಿ ಆಚರಿಸಲು ಆದೇಶಿಸಲಾಗಿರುವ ಹಬ್ಬಗಳ ಸಂಖ್ಯೆ ಎರಡೇ 'ಈದುಲ್ ಫಿತ್ರ್' ಮತ್ತು 'ಈದುಲ್ ಅಝ್‌ಹಾ'. ಆದರೆ ಸ್ಥಳೀಯ ವಿಭಿನ್ನ ಸಂಸ್ಕತಿಗಳಿಂದ ಪ್ರಭಾವಿತರಾದ ಕಾರಣದಿಂದ ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿಗಳು ಇವುಗಳೊಟ್ಟಿಗೆ ಇನ್ನೂ ಕೆಲವು ಹಬ್ಬಗಳನ್ನು ಆಚರಿಸುತ್ತಾರೆ. ಉದಾ;– ಮೊಹರ್ರಮ್, ಮಿಲಾದುನ್ನಬಿ, ಶಬೆಮೆಅರಾಜ್....ಇತ್ಯಾದಿ ಈ ಹಬ್ಬಗಳ ಆಚರಣೆಗೆ ಧಾರ್ಮಿಕ ನೆಲೆಗಟ್ಟಿನಲ್ಲಿ ಯಾವುದೇ ಸ್ಥಾನವಿಲ್ಲ. ಆದರೆ ಸ್ಥಳೀಯ ಬ್ಯಾರಿಗಳು ವಿಭಿನ್ನ ಸಂಸ್ಕೃತಿಗಳಿಂದ ಪ್ರಭಾವಿತರಾಗಿ ಇವುಗಳನ್ನು ಆಚರಿಸುವುದರಿಂದ ಇವುಗಳ ಕುರಿತು ವಾಸ್ತವಿಕವಾಗಿ ಅಧ್ಯಯನ ಅವಶ್ಯಕವೆನಿಸುತ್ತದೆ. ಇತ್ತೀಚಿಗಿನ ದಿನಗಳಲ್ಲಿ ಹಬ್ಬಗಳು ಸಮೀಪಿಸಿದರೆ ಸಾಕು, ನಗರದ ಆಯಕಟ್ಟಿನ ಸ್ಥಳಗಳಲ್ಲಿ ಪೋಲೀಸ್ ತುಕಡಿಗಳನ್ನು ನೇಮಿಸಿರುವುದನ್ನು ಕಾಣಬಹುದು. ಹಬ್ಬದ ಸಂದರ್ಭದಲ್ಲಿ ಸಂಭವಿಸುವ ಗಲಾಟೆಗಳು, ಹಬ್ಬಕ್ಕೆ

ಸಂಬಂಧಿಸಿದ ಮೆರವಣಿಗೆಗಳ ಸಮಯದಲ್ಲೇ ಹೆಚ್ಚಾಗಿ ಜರಗುವುದು ಗಮನಾರ್ಹ. ಉದಾ:-ಮಿಲಾದುನ್ನಬಿ ಮೆರವಣಿಗೆ, ಗಣೇಶ ಚತುರ್ಥಿ ಮೆರವಣಿಗೆಗಳನ್ನು ತಮ್ಮ ಶಕ್ತಿ ಪ್ರದರ್ಶನಕ್ಕಾಗಿ ಬಳಸಿಕೊಳ್ಳುವುದೂ ಇದಕ್ಕೆ ಕಾರಣವಿರಬಹುದು, ಹಬ್ಬಗಳನ್ನು ಸಕಾರತ್ಮಕವಾಗಿ ಬಳಸಿಕೊಳ್ಳಲು ಹಲವು ದಾರಿಗಳಿವೆ. ಪರಸ್ಪರರ ಧರ್ಮಗಳನ್ನು ಅರಿಯಲು ಹಬ್ಬಗಳು ಒಳ್ಳೆಯ ಅವಕಾಶವನ್ನು ನೀಡುತ್ತದೆ. ಹಬ್ಬದ ಸಂದರ್ಭದಲ್ಲಿ ಹಳೆಯ ದ್ವೇಷವನ್ನು ಮರೆತು ಹೃದಯಗಳು ಬೆಸದುಕೊಳ್ಳುತ್ತದೆ. ಬ್ಯಾರಿ ಹಬ್ಬಗಳು ಪರಸ್ಪರರ ಭಾವನೆಗಳಿಗೆ ಸ್ವಂದಿಸುವ ಸದವಕಾಶವನ್ನು ನೀಡುತ್ತದೆ ಹಾಗೂ ಕೋಮು ಸೌಹಾರ್ದದ ವಾತಾವರಣ ಮೂಡಿ ಬರುತ್ತದೆ. ಬ್ಯಾರಿ ಹಬ್ಬಗಳು ವರ್ತಮಾನದ ಭೀಕರತೆ ಹಾಗೂ ಭವಿಷ್ಯದ ಅನಿಶ್ಚಿತತೆಯ ನಡುವೆ ಡೋಲಾಯಮಾನವಾಗಿ ಓಲಾಡುವ ಮನಸ್ಸುಗಳಿಗೆ ತಂಪನ್ನೆರೆಯುತ್ತದೆ. ಬ್ಯಾರಿ ಮದುವೆಯಲ್ಲಿಯೂ ಹಲವಾರು ಸಮಾರಂಭಗಳಿವೆ, ಪೆಣ್ಣು ನೋಕುರೆ, ವರಪ್ಪು, ಕೇಳಿಕೇಕ್‌ರೆ, ತಿರುಂಬು ಇಡ್ಡೆ, ಖಾಯಿಂತ್, ಕುಟ್ಟು ತನ್ನಿ.... ಇತ್ಯಾದಿ. ಇತ್ತೀಚಿನ ದಿನಗಳಲ್ಲಿ ಹುಡುಗಿ ನೋಡುವುದು ಮತ್ತು ಖಾಯಿಂತ್ ಬಿಟ್ಟರೆ ಇತರ ಕ್ರಮಗಳನ್ನು ಬ್ಯಾರಿ ಸಮುದಾಯದವರು ಆಚರಿಸುವುದಿಲ್ಲ. ಯಾಕೆಂದರೆ ಇತ್ತೀಚಿನ ದಿನಗಳಲ್ಲಿ ಮನೆಯ ಯಜಮಾನನೊಬ್ಬನೆ ದುಡಿದು ಸಂಸಾರದ ಜವಾಬ್ದಾರಿಯನ್ನು ಹೊರುವ ಕಾರಣ, ಈ ಎಲ್ಲಾ ಸಮಾರಂಭವನ್ನು ಮಾಡಲು ಹಣದ ಕೊರತೆ, ಸಮಯದ ಅಭಾವ ಕಂಡು ಬರುತ್ತದೆ. ಅಲ್ಲದೆ ವಿದ್ಯಾವಂತರಾದ ಬ್ಯಾರಿ ಕುಟುಂಬದ ಇತರ ಸದಸ್ಯರು ಉದ್ಯೋಗಿಗಳಾದ ಕಾರಣ, ಬ್ಯಾರಿಗಳು ಇತರ ಸಮಾರಂಭಗಳ ಆಚರಣೆಯನ್ನು ಬಿಟ್ಟಿದ್ದಾರೆ. ಅಷ್ಟೇ ಅಲ್ಲದೆ ಎರಡು ವಾರಗಳ ತನಕ ಮಾಡುವ ಮದುವೆ ಒಂದು ಅಥವಾ ಎರಡು ದಿನಗಳಲ್ಲಿ ಮುಗಿಯುತ್ತದೆ. ಈ ರೀತಿಯ ಬದಲಾವಣೆಯಿಂದ ಇನ್ನು ಮುಂದೆ ಬ್ಯಾರಿ ಸಂಸ್ಕೃತಿ ಅವನತಿಯಾಗಬಹುದು-ಆದರೆ ಬ್ಯಾರಿಗಳು ಸುಶಿಕ್ಷಿತರಾದ ಹಾಗೆ ಈ ಮದುವೆ ಸಮಾರಂಭ ಆದಷ್ಟು ಸರಳವಾಗಿ ಮಾಡಿ ತಮ್ಮ ಮುಂದಿನ ಜೀವನದ ಬಗ್ಗೆಯೂ ಆಲೋಚಿಸುವುದು ಅನಿವಾರ್ಯ, ಆದ ಕಾರಣ ಈ ಎಲ್ಲಾ ರೀತಿಯ ಬದಲಾವಣೆಯಾಗಬೇಕಾಗಿದೆ ಉರೂಸ್ ಆಚರಣೆಯು ದೇವರ ಹೆಸರಿನಲ್ಲಿ ಹುತಾತ್ಮರನ್ನು ಔಲಿಯಾಗಳೆಂದು ಕರೆದು, ಮದ್ಯವರ್ತಿಗಳನ್ನಾಗಿರಿಸಿ ದೇವರಲ್ಲಿ ತಮ್ಮ ಇಷ್ಟ ಸಿದ್ದಿಗಾಗಿ

ಉತ್ಸವದ ರೀತಿಯಲ್ಲಿ ಎಲ್ಲರೂ ಒಂದು ಸೇರಿ ಸಾಮೂಹಿಕ ಪ್ರಾರ್ಥನೆ ನೆರವೇರಿಸುತ್ತಾರೆ. ಬ್ಯಾರಿಗಳಲ್ಲಿ ಈ ಔಲಿಯಾಗಳು ತಮ್ಮ ಇಷ್ಟಾರ್ಥಗಳನ್ನು ನೆರವೇರಿಸುತ್ತಾರೆ ಎಂಬ ಬಲವಾದ ನಂಬಿಕೆಯಿದೆ. ಬ್ಯಾರಿ ಸಮುದಾಯ ಅಲ್ಲಾಹುವಿನ ಮೇಲೆ ನಂಬಿಕೆಯಿಟ್ಟಾಗ. ಪವಾಡ ಪುರುಷರು ಇಷ್ಟಾರ್ಥ ಹೇಗೆ ನೆರವೇರಿಸಲು ಸಾಧ್ಯ? ಇಷ್ಟಾರ್ಥವನ್ನು ಅಲ್ಲಾಹುವಿನಲ್ಲಿ ಕೇಳಿಕೊಂಡಾಗ, ಅದು ಸಿದ್ಧಿಸುವುದು. ಇದಕ್ಕೆ ಮಧ್ಯವರ್ತಿಗಳ ಅಗತ್ಯವಿಲ್ಲ. ನಮಗೆ ಬೇಕಾದುದನ್ನು ಅಲ್ಲಾಹುವಿನಲ್ಲಿ ಹೇಳಿಕೊಂಡು, ನಮ್ಮ ದುಃಖ ಗಳನ್ನು ತೋಡಿಕೊಂಡಾಗ, ನಮ್ಮ ಮನಸ್ಸು ಹಗುರವಾಗುವುದು ಅದು ಬಿಟ್ಟು ದರ್ಗಾಕ್ಕೆ ಹೋಗಿ ಹುತಾತ್ಮರ ಸಮಾಧಿಗೆ ಮುತ್ತಿಟ್ಟು ತಮ್ಮ ಬೇಡಿಕೆಯನ್ನು ಮುಂದಿಡುವುದು ಸರಿಯಲ್ಲ ಎಂಬುದು ನನ್ನ ಅಭಿಪ್ರಾಯ. ಸಲಾತ್, ದುಆ, ಕುರಾನ್ ಪಾರಾಯಣದ ಮೂಲಕ ಪ್ರವಾದಿ ಪ್ರೇಮದ ಮಾಧುರ್ಯವನ್ನು ಮನದಲ್ಲಿ ತುಂಬುವುದು. ಮೌಲೂದ್ ಮಜ್ಲಿಸ್ ಒಂದು ಬರಕಾತ್ ತುಂಬಿದ ಸಭೆ ಎನ್ನಲಾಗುತ್ತದೆ. ಆದರೆ ಇದು ಅಗತ್ಯವೇ? ದಿನನಿತ್ಯ ಸಲಾತ್, ದುಆ, ಕುರಾನ್ ಪಾರಾಯಣ ಮಾಡಿದರೆ ಪ್ರವಾದಿ ಪ್ರೇಮದ ಮಾಧುರ್ಯ ತುಂಬಲು ಸಾಧ್ಯವಿಲ್ಲವೆ? ತುಂಬಿದ ಸಭೆಯು ಬೇಕೆ? ಇದರಲ್ಲಿಯೂ ಬ್ಯಾರಿ ಶ್ರೀಮಂತರ ಆಡಂಭರವನ್ನು ಕಾಣಬಹುದು. ಸಾಮಾನ್ಯ ಬ್ಯಾರಿ ಈ ಸಮಾರಂಭವನ್ನು ಮಾಡಲು ಸಾಧ್ಯವಿಲ್ಲ. ಅದರ ಬದಲು ಬಡವರಿಗೆ ದಾನ ಮಾಡಿದರೆ ಪ್ರವಾದಿ ಪ್ರೇಮದ ಮಾಧುರ್ಯ ತುಂಬಬಹುದು. ಬ್ಯಾರಿಗಳು ಮೂಢನಂಬಿಕೆಯಲ್ಲಿ ಆಳವಾದ ನಂಬಿಕೆ ತಾಳುತ್ತಾರೆ ಎಂಬುದು ಇತ್ತೀಚಿನ ಕಾಲದಲ್ಲಿ ಸಮಂಜಸವಲ್ಲ ಉದಾಹರಣೆ ನಮ್ಮ ಕುಟುಂಬದಲ್ಲಿ ಯಾರೂ ಮೂಢನಂಬಿಕೆಯಿಟ್ಟಿಲ್ಲ. ಯಾಕೆಂದರೆ ಈಗ ಬ್ಯಾರಿಗಳು ತಮ್ಮ ಅಸ್ತಿತ್ವವನ್ನು ಪಡೆಯಲು, ಉದ್ಯೋಗ ಮತ್ತು ಶಿಕ್ಷಣದ ಕಡೆ ಹೆಚ್ಚಿನ ಒಲವು ತೋರಿಸಿದ ಕಾರಣ ಮೂಢನಂಬಿಕೆಗಳಿಗೆ ಸ್ಥಾನವಿಲ್ಲ.

## ಅಡಿ ಟಿಪ್ಪಣಿ

೧. ಡಾ. ಫೌಝಿಯಾ ಸುಲ್ತಾನ್, ೨೦೦೦
ಮುಸ್ಲಿಮರ ಹಬ್ಬಗಳು, ಶಾಂತಿ ಪ್ರಕಾಶನ, ಮಂಗಳೂರು

**೨. ಇಚ್ಲಂಗೋಡು ಬಿ.ಎಂ.**
ಸಂಶೋಧನಾ ಕೃತಿ,

**೩. ಮುಹಮ್ಮದ್ ರಫೀಕ್ ೨೫.೦೫.೦೮**
ಮೌಖಿಕ ಭೇಟಿ, ಮೌಲಾನಾ, ಕಾರ್ನಾಡ್

**೪. ಇಚ್ಲಂಗೋಡು ಬಿ.ಎಂ.**
ಸಂಶೋಧನಾ ಕೃತಿ

**೫. ಡಾ. ಫೌಝಿಯಾ ಸುಲ್ತಾನ್, ೨೦೦೦**
ಮುಸ್ಲಿಮರ ಹಬ್ಬಗಳು, ಶಾಂತಿ ಪ್ರಕಾಶನ, ಮಂಗಳೂರು

**೬. ಮುಹಮ್ಮದ್ ಮುಸ್ತಫಾ, ೨೬.೦೫.೦೮**
ಮೌಖಿಕ ಭೇಟಿ, ಧರ್ಮಗುರುಗಳು, ಮುಲ್ಕಿ

**೭. ಹನೀಫ್ ಸಾದು, ೨೬.೦೫.೦೮**
ಮೌಖಿಕ ಭೇಟಿ, ಧರ್ಮಗುರುಗಳು, ಕಾರ್ನಾಡ್

**೮. ಹಮ್ಮೂದಾ ಅಬ್ದುಲ್ ಆತೀ, ೨೦೦೪**
ಇಸ್ಲಾಂ ಸೌರಭ, ಶಾಂತಿ ಪ್ರಕಾಶನ, ಮಂಗಳೂರು

**೯. ಡಾ. ಫೌಝಿಯಾ ಸುಲ್ತಾನ್, ೨೦೦೦**
ಮುಸ್ಲಿಮರ ಹಬ್ಬಗಳು, ಶಾಂತಿ ಪ್ರಕಾಶನ, ಮಂಗಳೂರು

**೧೦. ನೂರು ಮಹಮ್ಮದ್, ೨೭.೦೫.೦೮**
ಮೌಖಿಕ ಭೇಟಿ, ಮುಲ್ಕಿ

**೧೧. ಹಮ್ಮೂದಾ ಅಬ್ದುಲ್ ಆತೀ, ೨೦೦೪**
ಇಸ್ಲಾಂ ಸೌರಭ, ಶಾಂತಿ ಪ್ರಕಾಶನ, ಮಂಗಳೂರು

**೧೨. ಚಂದನ, ವಾರ್ಷಿಕೆ ಸಂಚಿಕೆ**
ಬಕ್ರೀದ್ ಬಲಿದಾನ, ಶ್ರೀ ಭುವನೇಂದ್ರ ಕಾಲೇಜ್

**೧೩. ಕೆ.ಎಂ. ಅಶ್ರಫ್, ೨೭.೦೫.೦೮**
ಮೌಖಿಕ ಭೇಟಿ, ಅಧ್ಯಕ್ಷರು, ಜಮಾತುಲ್ ಇಸ್ಲಾಂ, ಮಂಗಳೂರು

**೧೪. ಹಂಝ ಮಲಾರ್, ೨೦೦೧**
ಬ್ಯಾರಿ ಮುಸ್ಲಿಮರು, ಬ್ಯಾರಿ ಪ್ರಕಾಶನ, ಮಂಗಳೂರು

**೧೫. ಹಂಝಮಲಾರ್, ೧೯೯೭**
ಮ್ಯೊಲಾಂಜಿ, ಬ್ಯಾರಿ ಪ್ರಕಾಶನ, ಮಂಗಳೂರು

**೧೬. ಜಮೀಲಾ, ೧೮.೦೪.೦೮**
ಮೌಖಿಕ ಭೇಟಿ, ಅತ್ತಾವರ, ಮಂಗಳೂರು

**೧೭. ಸಾರಾ ಅಬುಬಕ್ಕರ್, ೨೫.೦೪.೦೮**
ಲೇಖಕಿ, ಮೌಖಿಕ ಭೇಟಿ, ಲಾಲ್ ಬಾಗ್

**೧೮. ಇಚ್ಲಂಗೋಡು ಬಿ.ಎಂ., ೧೯೯೭**
ತುಳುನಾಡ ಮುಸ್ಲಿಮರು, ಬ್ಯಾರಿ ಪ್ರಕಾಶನ, ಬೆಂಗಳೂರು

**೧೯. ಉಮರಬ್ಬ, ೧೩.೦೪.೦೮**
ಮೌಖಿಕ ಭೇಟಿ, ಸ್ಟೇಟ್‌ಬ್ಯಾಂಕ್, ಮಂಗಳೂರು

**೨೦. ಮುಹಮ್ಮದ ಹಕ್, ೧೩.೦೪.೦೮**
ಮೌಖಿಕ ಭೇಟಿ, ನ್ಯಾಯವಾದಿ, ಸ್ಟೇಟ್‌ಬ್ಯಾಂಕ್

**೨೧. ಫಾರೂಕ್, ೧೩.೦೪.೦೮**
ಮೌಖಿಕ ಭೇಟಿ, ತಲಪಾಡಿ

**೨೨. ಇಚ್ಲಂಗೋಡು ಬಿ.ಎಂ.**
ಸಂಶೋಧನ ಪ್ರಬಂಧ

**೨೩. ಇಚ್ಲಂಗೋಡು ಬಿ.ಎಂ.**
ಸಂಶೋಧನ ಪ್ರಬಂಧ

**೨೪. ಮೈಮುನ, ೨೪.೦೫.೦೮**
ಮೌಖಿಕ ಭೇಟಿ, ಪಡೀಲ್, ಮಂಗಳೂರು

# ಅಧ್ಯಾಯ ನಾಲ್ಕು

# ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ

೪.೪ ಬ್ಯಾರಿಗಳ ಸಾಮಾಜಿಕ ಜೀವನ

೪.೫ ವೃತ್ತಿಗಳು

೪.೬ ಸಾಮಾಜಿಕ ಬದಲಾವಣೆಯಲ್ಲಿ ಆರ್ಥಿಕ ವಿಚಾರಗಳ ಪಾತ್ರ

# ಅಧ್ಯಾಯ ನಾಲ್ಕು

# ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ

## ೪.೧. ಬ್ಯಾರಿಗಳ ಸಾಮಾಜಿಕ ಜೀವನ

ಹಿಂದಿನ ಬ್ಯಾರಿಗಳ ಸಾಮಾಜಿಕ ಜೀವನ ಮತ್ತು ಇಂದಿನ ಬ್ಯಾರಿಗಳ ಸಾಮಾಜಿಕ ಜೀವನ ಅವಲೋಕಿಸಿದಾಗ, ಸಾಕಷ್ಟು ಬದಲಾವಣೆಗಳಾಗಿವೆ. ಆಧುನಿಕ ಯುಗದೊಂದಿಗೆ ಬ್ಯಾರಿಗಳ ಜೀವನ ಶೈಲಿ ಬದಲಾವಣೆಯಾಗಿದೆ. ಬ್ಯಾರಿ ಸಮುದಾಯದ ಸಂಸ್ಕೃತಿಯಾದ ಸಮಾನತೆ ಮತ್ತು ಸಹೋದರತೆ ಈಗ ನಶಿಸಿಹೋಗಿದೆ, ನಡವಳಿಕೆಯಲ್ಲಿ ಉಂಟಾದ ಬದಲಾವಣೆಯೇ ಇದಕ್ಕೆ ಕಾರಣವಾಗಿರಬಹುದು. ಹಿಂದೆ ಬ್ಯಾರಿ ಸಮುದಾಯದಲ್ಲಿ ಎರಡು ಮೂರು ತಲೆಮಾರಿನ ಕುಟುಂಬ ಒಂದೇ ಸೂರಿನಡಿಯಲ್ಲಿ ಒಟ್ಟಿಗೆ ವಾಸವಾಗಿರುತ್ತಿತ್ತು. ಆದರೆ ಈಗ ಒಂದೇ ತಾಯಿಯ ಮಕ್ಕಳು ಬೇರೆ ಬೇರೆ ಮನೆ ಮಾಡಿಕೊಂಡು ವಾಸಿಸುತ್ತಾರೆ. ಕಾಲ ಬದಲಾದಂತೆ ಪ್ರೀತಿ, ವಾತ್ಸಲ್ಯಗಳು ಕಡಿಮೆಯಾಗುತ್ತಿದೆ.

ಸಾವಿರಾರು ವರ್ಷಗಳ ಹಿಂದಿನಿಂದಲೂ ಬ್ಯಾರಿಗಳು ಸಮಾಜದಲ್ಲಿ ಹಲವಾರು ಹಬ್ಬಗಳನ್ನು ಆಚರಿಸುತ್ತಿದ್ದರು **(ಪುಟ: ೪೨)** ಆದರೆ ಈಗ ಆಚರಿಸುವ ಹಬ್ಬಗಳ ಸಂಖ್ಯೆ ಕಡಿಮೆಯಾಗಿದೆ. ಉದಾ:-ಮೊಹರಂ ಮುಂಚೆ ಮಂಗಳೂರಿನ ಕರ್ಬಲ ಮೈದಾನದಲ್ಲಿ ಬಹಳ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಮುಲ್ಕಿಯು ಈ ಹಬ್ಬದ ಆಚರಣೆಗೆ ಹೆಸರುವಾಸಿಯಾಗಿದೆ. ಆದರೆ ಈಗ ಮೊಹರಂ ಆಚರಣೆ ನಿಂತು ಹೋಗಿದೆ ಯಾಕೆಂದರೆ, ಕೆಲವರ ಪ್ರಕಾರ ಇದು ತುಳು ಸಂಸ್ಕೃತಿಯಿಂದ ಬಂದಿದೆ. ಇದರ ಆಚರಣೆ ಸರಿಯಲ್ಲ. ಬಹಳ ನಿರಾಳವಾಗಿ ಕೆಲವು ಕಡೆ ಹಸೆನ್ ಮತ್ತು ಹುಸೇನರ ತ್ಯಾಗದ ಬಲಿದಾನವನ್ನು ನೆನಪಿಸಿಕೊಳ್ಳಲಾಗುತ್ತದೆ. ರಂಜಾನ್ ಉಪವಾಸದ ಆಚರಣೆಯಂತೂ ಬಹಳ ಸಂತೋಷದಿಂದ ಮಾಡಲಾಗುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಂತೂ ಈ ಹಬ್ಬವೂ ಸಂಸ್ಕೃತಿಯ ಒಂದು ಅಂಶವೆಂದು ಕಾಣಲಾಗುತ್ತದೆ. ಉದಾ:-ನಾನು ಚಿಕ್ಕವಳಿದ್ದಾಗ, ಬೆಳಗಿನ ಜಾವ ಎದ್ದು, ಅಮ್ಮ

ಕೊಟ್ಟ ಬಗೆಬಗೆಯ ಅಡುಗೆ ಯನ್ನು ಎಲ್ಲರೂ ಒಟ್ಟಿಗೆ ಸೇರಿ, ತಿಂದು, ಪ್ರಾರ್ಥನೆಮಾಡಿ ಉಪವಾಸ ನೀಯತ್ ಹೇಳಿ, ರಂಜಾನ್ ತುಂಬಾ ಖುಷಿಪಟ್ಟುಕೊಂಡು ಆಚರಿಸುತ್ತಿದ್ದೆವು. ಹಬ್ಬದ ದಿನದಂದು ಇಡೀ ಊರಿನವರು ಒಟ್ಟು ಸೇರಿ ಆಚರಿಸುತ್ತಿದ್ದೆವು. ಆದರೆ ಈ ಕಾಲದಲ್ಲಿ ಉಪವಾಸ ಮತ್ತು ಹಬ್ಬದ ದಿನ ಸಂತೋಷದ ದಿನಗಳಾಗದೆ, ಸಂಸ್ಕೃತಿಯ ಒಂದು ಅಂಗವಾಗಿ ಮಾತ್ರ ಉಳಿದಿದೆ. ಆ ಓಡಾಟ, ಹೊಸ ಅಂಗಿಯ ಸಡಗರ, ಮೆಹಂದಿಯ ಬಣ್ಣವೆಲ್ಲವು ಈಗ ಸಪ್ಪೆಯಾಗಿ ಆಚರಿಸುವಂತಾಗಿದೆ. ಹಬ್ಬದ ದಿನದಂದು ಮಾಡುವ ಅಡುಗೆಯನ್ನು ಹಿಂದೆ ನಾವು ಬಣ್ಣಿಸಿ ತಿನ್ನುತ್ತಿದ್ದೆವು. ಆದರೆ ಈಗ ಹಬ್ಬದ ಅಡುಗೆ ಮನಸ್ಸು ಬಂದಾಗ ಮಾಡುವ ಕಾರಣ ಅದರಲ್ಲಿ ವಿಶೇಷತೆ ಏನು ಕಂಡು ಬರುವುದಿಲ್ಲ.

ಈ ರೀತಿ ಬ್ಯಾರಿ ಸಮುದಾಯದ ಸಂಸ್ಕೃತಿಯ ಅಂಗವಾದ ಈ ಎಲ್ಲಾ ಹಬ್ಬದ ಆಚರಣೆಯು ಕಾಲಕಾಲಕ್ಕೆ ಬದಲಾವಣೆಯಾಗುತ್ತಾ ಬಂದಿದೆ. ಅಷ್ಟೇ ಅಲ್ಲದೆ ಜಮಾತುಲ್ ಇಸ್ಲಾಮಿನವರ ಪ್ರಕಾರ ಮುಸ್ಲಿಂ ಹಬ್ಬಗಳು ಎರಡೆ ರಂಜಾನ್ ಮತ್ತು ಬಕ್ರೀದ್ ಇತರ ಹಬ್ಬಗಳು ತುಳುನಾಡಿನ ಸಂಸ್ಕೃತಿ ನಾವು ಅದರ ಆಚರಣೆ ಮಾಡುವುದು ತಪ್ಪು ಎನ್ನುತ್ತಾರೆ.

ಇನ್ನು ಇತರ ಸಮಾರಂಭಗಳು ಮತ್ತು ಧಾರ್ಮಿಕ ಆಚರಣೆಗಳಲ್ಲೂ ಬದಲಾವಣೆಯನ್ನು ಕಾಣಬಹುದು. ಮದುವೆ ಸಮಾರಂಭವು, ಪೆಣ್ಣ್ ನೋಕುರ್, ವರಪ್ಪು, ಕೇಳೀಕೇಕ್‌ರ್, ತಿರುಂಬ್ ಇಡ್ಡೆ, ಖಾಯಿಂತ್, ಕುಟ್ಟುತನ್ನಿ, ತಾಲ **(ಪುಟ: ೪೯)** ಮುಂತಾದ ಕಾರ್ಯಕ್ರಮಗಳು ಹಲವಾರು ದಿನಗಳವರೆಗೆ ನಡೆಯುತ್ತಿತ್ತು. ಆದರೆ ಈಗಿನ ಕಾಲದ ಮುದುವೆ ಹಾಲ್‌ಗಳಲ್ಲಿ ಒಂದೇ ದಿನದಲ್ಲಿ ಮುಗಿದು ಹೋಗುತ್ತದೆ. ಬ್ಯಾರಿಗಳಿಗೆ ತುಂಬಾ ದಿನಗಳವರೆಗೆ ಆಚರಿಸಲು ತಾಳ್ಮೆ, ಹಣದ ಅಭಾವ, ಸ್ಥಳದ ಕೊರತೆಯಂತ ಮುಂತಾದ ಸಮಸ್ಯೆಗಳಿರುವುದರಿಂದ ಒಂದೇ ದಿನದಲ್ಲಿ ಮುಗಿಸುತ್ತಾರೆ. ಹಿಂದಿನ ಕಾಲದಲ್ಲಿ ಮದುವೆಯ ದಿನಗಳವರೆಗೆ ಸಮಾರಂಭದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು ಈಗಿನ ಕಾಲದಲ್ಲಿ ಕಾಣ ಸಿಗುವುದಿಲ್ಲ. ಈ ರೀತಿಯ ಬದಲಾವಣೆಯಿಂದ ಕುಟುಂಬದಲ್ಲಿ ಇದ್ದಂತ ಸಹೋದರತೆ, ಪ್ರೀತಿ, ವಾತ್ಸಲ್ಯ ಕಡಿಮೆಯಾಗುತ್ತದೆ.

ಇತರ ಸಮಾರಂಭಗಳಾದ ಸುನ್ನತ್ ಮಂಗಿಲ, ಕುಟ್ಟಿ ಬೈಲ್, ಕಾದ್ ಕುತ್ತುರೊ ಮಂಞಳ, ನಾಪೊರೆಕುಲಿ, ಕಜಂಬು, ಪೇರ್‌ಬೆಯ್‌ಕುರೆ, ಅಪ್ಪತೆ ಮಂಗಿಲ **(ಪುಟ: ೫೩)** ಮುಂತಾದ ಸಮಾರಂಭಗಳ ಆಚರಣೆಯೂ ನಿಂತುಹೋಗಿದೆ. ಸುನ್ನತ್‌ಮಂಗಿಲ ಈಗ ಗಂಡು ಮಗು ಹುಟ್ಟಿದಾಗ ಆಸ್ಪತ್ರೆಯಲ್ಲಿಯೇ ವೈದ್ಯರಿಂದ ಮಾಡಿಸಿಬಿಡುತ್ತಾರೆ. ಹಿಂದಿನ ಕಾಲದ ಹಾಗೆ ಇಡೀ ಕುಟುಂಬದವರನ್ನು ಕರೆದು ವಸನ್ ಮೂಲಕ ಮಾಡಲ್ಪಡುವ ಈ ಸಮಾರಂಭವು ಈಗ ಆಸ್ಪತ್ರೆಗೆ ಸೀಮಿತವಾಗಿದೆ. ಬ್ಯಾರಿಗಳು ತಮ್ಮ ಮನೆ, ಮಠ, ಅಂಗಡಿ ಮುಂತಾದವುಗಳನ್ನು ಕಟ್ಟುವ ಮೊದಲು ಮಾಡುವಂತ ಕಾರ್ಯಕ್ರಮಗಳು ಈಗ ಬೇಕಾದವರು ಮಾತ್ರ ಮಾಡುವಂತಾಗಿದೆ. ಕಾದ್‌ಕುತ್ತುರೊ, ಅಪ್ಪತೆಮಂಗಿಲ, ಕಜಂಬು ಮುಂತಾದ ಸಮಾರಂಭಗಳ ಬಗ್ಗೆ ಈ ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಆದರೆ ಇತ್ತೀಚಿನ ಕಾಲದಲ್ಲಿ ಈ ಎಲ್ಲಾ ಸಮಾರಂಭಗಳ ಆಚರಣೆ ಕಡಿಮೆಯಾಗುತ್ತಾ ಬಂದಿದೆ. ಇನ್ನು ಕೆಲವು ವರ್ಷಗಳ ನಂತರ ಬ್ಯಾರಿ ಸಂಸ್ಕೃತಿಯೆಂದು ಹೆಮ್ಮೆಯಿಂದ ಹೇಳಿಕೊಳ್ಳಲಾಗುವುದಿಲ್ಲವೋ? ಎಂಬ ಸಂಶಯ.

ಧಾರ್ಮಿಕ ಆಚರಣೆಯಾದಂತ 'ಉರೂಸ್' ಈಗ ಪ್ರಾಮುಖ್ಯತೆಯನ್ನು ಕಳೆದುಕೊಂಡಿದೆ. ಬ್ಯಾರಿ ಸಮುದಾಯದಲ್ಲಿ ಉರೂಸ್ ಆಚರಣೆಯಲ್ಲಿ ಈಗಲೂ ನಂಬಿಕೆಯಿದೆ. ಇನ್ನೊಂದು ಪಂಗಡದವರಾದ ಜಮಾತುಲ್ ಇಸ್ಲಾಮಿನಲ್ಲಿ 'ಉರೂಸ್' ಗೆ ಸ್ಥಾನವಿಲ್ಲ ಅವರ ಪ್ರಕಾರ ಮಹಾಪುರುಷರ ಗೋರಿಗಳಲ್ಲಿ ನಂಬಿಕೆ ಇಡುವುದು ಮತ್ತು ಬೇಡವುದೂ ಸರಿಯಲ್ಲ. ನಾವು ನೇರವಾಗಿ ಅಲ್ಲಾಹುವಿನೊಡನೆ ಮಾತ್ರ ಬೇಡಬೇಕು ಎನ್ನುತ್ತಾರೆ. ವಿದ್ಯಾವಂತರಾದಂತೆ ಉರೂಸ್ ಆಚರಣೆಯ ಮೇಲೆ ವಿಶ್ವಾಸವಿರುವುದಿಲ್ಲ. ಆದರೆ ಹಳ್ಳಿಗಳಲ್ಲಿ ಮಾತ್ರ ಈಗಲೂ ಈ ಉರೂಸ್ ಆಚರಣೆ ಜಾರಿಯಲ್ಲಿದೆ.

ಬ್ಯಾರಿಗಳು ಹಿಂದಿನಿಂದಲೂ ಮೂಢನಂಬಿಕೆಯಲ್ಲಿ ಆಳವಾದ ನಂಬಿಕೆ ತಾಳಿದವರು. ಹೆಚ್ಚಿನ ಜನರು ಭೂತಾರಾಧನೆಯಲ್ಲಿ ನಂಬಿಕೆಯನ್ನು ಇಡುತ್ತಿದ್ದರು. ಆದರೆ ಈಗ ಅದು ಹಿಂದೂ ಸಂಪ್ರದಾಯವೆಂದು ಹೇಳಿ ಬ್ಯಾರಿಗಳು ಭೂತಾರಾಧನೆ ಮಾಡಿದರೆ ಇತರರು ಅವರ ಮೇಲೆ ಒಳ್ಳೆಯ ಅಭಿಪ್ರಾಯವನ್ನು ಇಟ್ಟುಕೊಳ್ಳುವುದಿಲ್ಲ. ಬ್ಯಾರಿಗಳು ನಂಬಿದರೆ ಅವರ ಮೇಲೆ

ಒಳ್ಳೆಯ ಅಭಿಪ್ರಾಯವಿರುವುದಿಲ್ಲ. ಕೆಲವು ಬ್ಯಾರಿಗಳು ಈಗಲೂ ಮಾಟಮಂತ್ರಗಳಲ್ಲಿ ನಂಬಿಕೆ ಇಟ್ಟು ಕೊಳ್ಳುತ್ತಾರೆ. ಆಧುನಿಕ ಕಾಲದಲ್ಲಿ ಮಾಟಮಂತ್ರಗಳಲ್ಲಿ ಇರುವ ಅಭಿಪ್ರಾಯ ಕಡಿಮೆಯಾಗಿದೆ. ದೃಷ್ಟಿ ತೆಗೆಯುವಂತ ಪದ್ದತಿಯೂ ಬ್ಯಾರಿಗಳ ಸಮಾಜದಲ್ಲಿ ಕಾಣಸಿಗುತ್ತಿತು. ಆದರೆ ಈಗ ಪಟ್ಟಣದಲ್ಲಿ ನೆಲೆಸಿದ ಬ್ಯಾರಿಗಳಿಗೆ ಯಾರದೃಷ್ಟಿಯೂ ಬೀಳುವುದಿಲ್ಲ ಈ ಪದ್ದತಿಯೂ ನಶಿಸುತ್ತಾ ಇದೆ.

ಇನ್ನು ಉಡುಗೆ ತೊಡಿಗೆಯ ಬಗ್ಗೆ ಹೇಳಿದರೆ ಸಾಕಷ್ಟು ಬದಲಾವಣೆಯನ್ನು ಕಾಣಬಹುದು. ಹಿಂದಿನ ಕಾಲದಲ್ಲಿ ಉಪಯೋಗಿಸಿತ್ತಿದ್ದ ಉಡುಗೆಗಳ ಪಾವಿತ್ರ್ಯತೆ ಸಂಪೂರ್ಣ ನಾಶವಾಗಿ. ಉಡುಗೆಯಲ್ಲೂ ಆಧುನಿಕತೆಯನ್ನು ಕಾಣಬಹುದು. ಯಾವುದೇ ಹೊಸ ರೀತಿಯ ಉಡುಗೆ ಬಂದರೆ ಮೊದಲು ಬ್ಯಾರಿಗಳು ಆಕರ್ಷಣೆಗೆ ಒಳಗಾಗಿ, ಅದು ದುಬಾರಿಯಾದರೂ ಹಿಂದೆ ಮುಂದೆ ನೋಡಿದೆ ಕೊಂಡು ಸಮಾಧಾನ ಪಡುತ್ತಾರೆ. ಆಭರಣಗಳ ವಿಚಾರವಾಗಿ ಹೇಳುವುದಾದರೆ, ಬ್ಯಾರಿ ಸಮುದಾಯದವರು ಉಪಯೋಗಿಸುವಷ್ಟು ಒಡವೆಗಳು ಯಾವ ಸಮುದಾಯದವರೂ ಹಾಕಲಾರರು. ಆದರೆ ಹಿಂದಿನ ಒಡವೆಗಳ ಪ್ರಾಮುಖ್ಯತೆ ಕಡಿಮೆಯಾಗಿ ಹೊಸ ರೀತಿಯ ಒಡವೆಗಳನ್ನು ಮತ್ತು ಗಲ್ಫ್‌ರಾಷ್ಟದಿಂದ ತಂದಂತಹ ಒಡವೆಗಳನ್ನು ತೊಡುತ್ತಾರೆ.

ವರದಕ್ಷಿಣೆ ವಿಚಾರದಲ್ಲಿಯೂ, ಹಿಂದಿನಕಾಲದಲ್ಲಿ ಬ್ಯಾರಿಗಳು ವರದಕ್ಷಿಣೆ ಕೊಡುವುದರಲ್ಲಿ ಮತ್ತು ತೆಗೆದುಕೊಳ್ಳುವುದರಲ್ಲಿ ಹಿಂದೆ ಉಳಿದವರು. ಆದರೆ ಈಗಿನ ಕಾಲದಲ್ಲಿ ವರದಕ್ಷಿಣೆ ಕೊಡುವುದರಲ್ಲಿ ಮತ್ತು ತೆಗೆದುಕೊಳ್ಳುವುದರಲ್ಲಿ ತಾವು ನಿಸ್ಸೀಮರರೆಂದು ತೋರಿಸಿಕೊಳ್ಳುತ್ತಿದ್ದಾರೆ. ಇದರಿಂದ ಬಡ ಬ್ಯಾರಿ ಹೆಣ್ಣು ಮಕ್ಕಳ ಮದುವೆಗೆ ತುಂಬಾ ಕಷ್ಟಪಡಬೇಕಾಗುತ್ತದೆ. ಮೊದಲು ಬ್ಯಾರಿಗಳು ಸಾಮಾಜಿಕವಾಗಿ ಹಿಂದುಳಿದವರು ಆದರೆ ಈಗ ಸಮಾಜದಲ್ಲಿ ತಮ್ಮನ್ನು ತಾವೇ ಗುರುತಿಸಿಕೊಳ್ಳುತ್ತಿದ್ದಾರೆ.

ಈ ಎಲ್ಲಾ ಸಾಮಾಜಿಕ ಜೀವನದಲ್ಲಾದ ಬದಲಾವಣೆಗಳಿಗೆ ಕಾರಣ ಆರ್ಥಿಕತೆಯಲ್ಲಾದ ಏರುಪೇರು, ಮತ್ತು ವಿಧ್ಯಾಭ್ಯಾಸ ಪಡೆಯುವುದರ ಮೂಲಕ ಹಾಗೂ ಕುಟುಂಬ ವ್ಯವಸ್ಥೆಯಲ್ಲುಂಟಾದ ಅಸ್ಥಿರತೆ ಎಂದು ಹೇಳಬಹುದು. ಈಗ ಬ್ಯಾರಿ ಸಮುದಾಯವು

ಸಾಮಾಜಿಕ ಜೀವನದಲ್ಲಿ ಮುಂದೆ ಬರುತ್ತಿದೆ ಏಕೆಂದರೆ ಹೆಚ್ಚಿನವರು ಪಟ್ಟಣದಲ್ಲಿ ವಾಸಿಸಿ ತಮ್ಮ ಮಕ್ಕಳ ವಿಧ್ಯಾಭ್ಯಾಸದ ಕಡೆ ಹೆಚ್ಚಿನ ಒಲವನ್ನು ತೋರಿಸುತ್ತಿದ್ದಾರೆ. ತಾವೂ ಇತರ ಸಮುದಾಯದವಂತೆ ಮುಂದೆ ಬರಬೇಕೆನ್ನುವ ಛಲವೂ ಇದೆ. ಈ ಛಲವು ಸ್ಪರ್ಧೆಯ ರೂಪದಲ್ಲಿ ಮುಂದುವರಿಯುವುದೋ ಎಂದು ಆಶಿಸಿ ಕಾದುನೋಡಬೇಕಾಗಿದೆ.

## ಆರ್ಥಿಕ ಜೀವನ

## ೪.೨ ವೃತ್ತಿಗಳು

ಬ್ಯಾರ ಅಥವಾ ವ್ಯಾಪಾರವು ಬ್ಯಾರಿಗಳ ನಾಡಿ ನರಗಳಲ್ಲಿ ಕರಗತ ಮಾಡಿಕೊಂಡು ಬಂದದ್ದಾಗಿದೆ. ಪ್ರಾಚೀನ ಕಾಲದಿಂದಲೇ ಜಿಲ್ಲೆಯ ಬ್ಯಾರಿ ಮುಸ್ಲಿಮರು ಕಟ್ಲೆರಿ ಅಥವಾ ಜಿನಸು ಅಂಗಡಿ ವ್ಯಾಪಾರದಲ್ಲಿ ತೊಡಗಿಕೊಂಡಿದ್ದರು. ಹಂದಿ ಮತ್ತು ಶೇಂದಿ ಈ ಎರಡು ಆದಾಯ ಮೂಲಗಳನ್ನು ತಮ್ಮ ವ್ಯಾಪಾರದ ಕಕ್ಷೆಯೊಳಗೆ ಸೇರಿಸದ ಬ್ಯಾರಿಗಳು ಮಿಕ್ಕುಳಿದ ಎಲ್ಲಾ ಕಸಬುಗಳಲ್ಲಿ ನಿರತರಾಗಿರುವುದು ಕಂಡು ಬರುತ್ತದೆ.

ಮಂಗಳೂರು ದೊಡ್ಡ ಪಟ್ಟಣವಾಗಿತ್ತು. ಬ್ಯಾರಿಗಳು ಮತ್ತು ಜೈನರು ಬಹುಸಂಖ್ಯೆಯಲ್ಲಿದ್ದು, ಇವರೊಳಗೆ ಉತ್ತಮ ವ್ಯಾಪಾರ ಸಂಬಂಧವಿತ್ತು. ಎಂದು ೧೫೧೪ರಲ್ಲಿ ಇಟಲಿಯ ಬಾರ್ಬೋಸಾ ಎಂಬ ಸಂದರ್ಶಕ ಬರೆದಿದ್ದ[೧].

ಕಷ್ಟಸಹಿಷ್ಣುಗಳು, ಸ್ವಾಭಿಮಾನಿಗಳೂ ಆದ ಬ್ಯಾರಿಗಳಿಗೆ ವ್ಯಾಪಾರ ವಂಶಪಾರಂಪರ್ಯವಾಗಿ ಬಂದದ್ದಾಗಿದೆ. ತುಳುನಾಡಿನ ಮನೆಮನೆಗಳಲ್ಲಿ ಸೈಕಲಲ್ಲಿ ಇಲ್ಲವೇ ನಡೆದು ಕೊಂಡು ಮೀನು ಮಾರುವ, ಒಂದು ಹಲಸಿನಕಾಯಿಯನ್ನು ಐವತ್ತಕ್ಕು ಹೆಚ್ಚು ತುಂಡು ಮಾಡಿ ಪ್ರತಿ ತುಂಡನ್ನು ಚೌಕಾಶಿ ಮಾಡಿ ಮಾರಾಟ ಮಾಡುವ ಬ್ಯಾರಿ ತುಳುನಾಡಿನ ಎಲ್ಲರಿಗೂ ಬೇಕಾದ ಜನ ಸಾಮಾನ್ಯ ಎಂದು ಹಿರಿಯ ಲೇಖಕ ಡಾ. ವಹಾಬ್ ದೊಡ್ಡಮನೆ ಅವರು ಲೇಖನವೊಂದರಲ್ಲಿ ಬರೆದಿದ್ದಾರೆ[೨].

ಸುಣ್ಣಬೇಯಿಸಿ ಮಾರುವ, ಮೀನು ಹಿಡಿದು ಮಾರುವ, ಕಡವು, ಕಲ್ಲಿನಕೊರೆ ಮತ್ತಿತರ ಎಲ್ಲಾ ರೀತಿಯ ಗುತ್ತಿಗೆ ಪಡೆಯುವ, ನಶ್ಯ ತಯಾರಿಸುವ, ಬೇಡಿ ತಯಾರಿಸುವ, ಇಟ್ಟಿಗೆ

ತಯಾರಿಸುವ, ಕೂಲಿ ಮಾಡುವ ಹೀಗೆ ಬ್ಯಾರಿಗಳು ಕೈಯಾಡಿಸದ ಕಸಬಿಲ್ಲ ೧೮೮೧ ರ ಜನಗಣತಿಯ ಪ್ರಕಾರ ತುಳುನಾಡಿನಲ್ಲಿ ೯೦ ಸಾವಿರ ಮಂದಿ ಬ್ಯಾರಿ ವ್ಯಾಪಾರಿಗಳಾಗಿದ್ದು, ಇದರಿಂದ ಆ ಕಾಲದಲ್ಲೆ ಜಿಲ್ಲೆಯ ವ್ಯಾಪಾರಿ ವಹಿವಾಟುಗಳಲ್ಲಿ ಬ್ಯಾರಿಗಳ ಪ್ರಾತ ಎಷ್ಟಿತ್ತೆಂಬುದು ಮನದಟ್ಟಾಗುತ್ತದೆ. ಜಾನುವಾರು ವ್ಯಾಪಾರದಲ್ಲಿ ಬ್ಯಾರಿಗಳದ್ದು ಎತ್ತಿದ ಕೈ. ಒಂದು ಕಡೆಯಿಂದ ಸಾಗಿಸಿ ಮಾರಾಟ ಮಾಡುವ ವ್ಯಾಪಾರದಲ್ಲಿ ಬಹುತೇಕ ಬ್ಯಾರಿಗಳು ತೊಡಗಿಸಿಕೊಂಡಿದ್ದರು. ಹಿಂದೆ ಒಂದು ಹಸುವನ್ನು ಮಾರಾಟ ಮಾಡಬೇಕಾದರೆ, ಹಸುವನ್ನು ಕೊಂಡು ಕೊಳ್ಳುವ ವ್ಯಕ್ತಿಯ ಮನೆಯಲ್ಲಿ ಮೂರು ದಿನಕಟ್ಟಿ ಹಾಕಿ ಅದು ದಿನಕ್ಕೆ ಇಂತಿಷ್ಟು ಹಾಲು ಕೊಡುತ್ತದೆ ಎಂದು ಸಾಬೀತು ಪಡಿಸಬೇಕಾಗುತ್ತದೆ. ಅದರ ನಂತರವೇ ಹಸುವಿನ ಮಾರಾಟ ಮಾಡಲಾಗುತ್ತದೆ. ಈಗಲೂ ಬ್ಯಾರಿಗಳು ಜಾನುವಾರು ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದು, ಹಾಲಿನ ಮಾರಾಟದಲ್ಲೂ ಮುಂಚೂಣಿಯಲ್ಲಿದ್ದಾರೆ. ಮನೆಮನೆಗೆ ಹೋಗಿ, ಅಳೆದು ಹಾಲು ಮಾರುತ್ತಾರೆ.

ಅರಬ್ ಸಂಪರ್ಕದಿಂದ ಉಂಟಾದ ವ್ಯಾಪಾರ ಸಂಬಂಧವು ಸಾರಿಗೆ ಕ್ಷೇತ್ರಕ್ಕೂ ಹಬ್ಬಿಕೊಂಡಿದೆ. ನದಿ ಸಾರಿಗೆ ಅಂದರೆ ದೋಣಿಹಾಯಿಸುವುದು, ಕಡವು ಗುತ್ತಿಗೆ ಪಡೆಯುವುದು ಪಾತಿ ಮೂಲಕ ವಿವಿಧ ಕಡೆಯಿಂದ ಸಾಮಾನು ಸಾಗಿಸಲು ಗುತ್ತಿಗೆ ಪಡೆಯುತ್ತಿದ್ದರು. ಜಿಲ್ಲೆಯ ಸಮುದ್ರ ವ್ಯಾಪಾರವು ಮಂಗಳೂರು ಮೂಲಕವೇ ಹೆಚ್ಚಾಗಿ ನಡೆಯುತ್ತಿದ್ದು. ಇದರಿಂದ ಬ್ಯಾರಿಗಳು ವ್ಯಾಪಾರ ವಹಿವಾಟಿನಲ್ಲಿ ಪಾಲ್ಗೊಳ್ಳಲು ಹೆಚ್ಚು ಅನುಕೂಲವಾಗುತ್ತಿತ್ತು. ಬ್ರಿಟಿಷರಿಂದ ಖಾನ್ ಬಹದ್ದೂರ ಎಂಬ ಬಿರುದು ಕೂಡಾ ಬ್ಯಾರಿ ವರ್ತಕ ಅಬೂಬಕರ್ ಹಾಜಿ ಫಕೀರ್ ಎಂಬುವರಿಗೆ ಸಿಕ್ಕಿತ್ತು. ಮಂಗಳೂರಿನಲ್ಲಿ ಪ್ರಧಾನವಾಗಿ ಕಾಣಿಸಿಕೊಂಡ ಹಂಚಿನ ಕಾರ್ಖಾನೆ, ಮರದ ಮಿಲ್ಲು, ಇಟ್ಟಿಗೆ ಕಾರ್ಖಾನಗಳಲ್ಲಿ ಬ್ಯಾರಿಗಳ ಬೆವರ ಹನಿ ಇದೆ. ಇಂದಿಗೂ ಗುರುಪುರ, ಅಡ್ಯಾರ್, ಕಣ್ಣೂರು, ವಳಚ್ಚಿಲ್ ಮುಂತಾದ ನದಿತೀರದಲ್ಲಿ ಮತ್ತು ಕುಂಜತ್ತಬೈಲ್, ಮರವೂರು, ಅಂಬ್ಲಮೊಗರು, ಕಾರವಾರ, ಕಾಸರಗೋಡು ಮುಂತಾದ ಕಡೆಯೂ ಬ್ಯಾರಿಗಳು ಇಟ್ಟಿಗೆ ತಯಾರಿಸುವಲ್ಲಿ ನಿರತರಾಗಿದ್ದಾರೆ. ಅಲ್ಲದೆ ಬ್ಯಾರಿಗಳು ಹೆಚ್ಚಾಗಿ ನದಿಬಯಲು ಪ್ರದೇಶದಲ್ಲಿ ನೆಲೆಸಿರುವುದು ಕಂಡುಬರುತ್ತದೆ.

ಮೀನುಗಾರಿಕೆಯಲ್ಲೂ ಬ್ಯಾರಿಗಳು ಕೈಯಾಡಿಸಿದ್ದಾರೆ. ಸುಮಾರು ಮೂರು ಸಾವಿರ ಬ್ಯಾರಿಗಳು ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ ಎಂದು ಅಂದಾಜಿಸಲಾಗಿದೆ. ಉಳ್ಳಾಲ ಬಂದರುದಕ್ಕೆ, ಮುಕ್ಕ, ಮಲ್ಪೆ, ಗೋವ, ಕಾರವಾರ ಮುಂತಾದೆಡೆಯೂ ಬ್ಯಾರಿಗಳು ಅಧಿಕ ಸಂಖ್ಯೆಯಲ್ಲಿ ಮಿನುಗಾರಿಕೆಯಲ್ಲಿ ರಫ್ತು ಮಾಡುವ, ರಖಂ ಮತ್ತು ಚಿಲ್ಲರೆಯಾಗಿ ಮಾರುವ, ಒಣಗಿಸುವ, ಊರೂರು ಅಲೆದು ಮಾರುವ ಹೀಗೆ ಹಲವಾರು ವಿಧದಲ್ಲಿ ದುಡಿಯುತ್ತಾರೆ. ಮುಂಜಾನೆ ಐದು ಗಂಟೆಯಿಂದ ಹತ್ತುಗಂಟೆಯವರೆಗೆ ಮೀನುಗಾರಿಕೆ ಭರದಿಂದ ಸಾಗುತ್ತಿದೆ, ಬ್ಯಾರಿ ಜನಾಂಗದ ಒಂದು ವರ್ಗ ಮೀನುಗಾರಿಕೆಯನ್ನೇ ತಮ್ಮ ಕುಲಕಸುಬನ್ನಾಗಿಸಿ ಕೊಂಡಿದೆ. ಇವರನ್ನು 'ಪುಸುಲರ್' ಎಂದು ಕರೆಯಲಾಗುತ್ತದೆ. ಇವರಿಗೆ ಕಡಲು ಎಂದರೆ ಧರೆಗೆ ಧುಮುಕಿದ ಹಾಗೆ ಅಲ್ಲದೆ ಸಾಮಾನ್ಯವಾಗಿ ಇವರ ಮೈಬಣ್ಣವೂ ಕಪ್ಪು. 'ಪುಸುಲರ್' ರನ್ನು ಬ್ಯಾರಿಗಳ ಉಪವರ್ಗ ಎಂದು ಗುರುತಿಸಲಾಗಿದೆ. ಪುದು ಇಸ್ಲಾಮ್ ಎಂಬ ಪದದಿಂದ ಅಂದರೆ ಮತಾಂತರದಿಂದಾಗಿ ಇವರಿಗೆ 'ಪುಸುಲರ್'ಎಂಬ ಉಪನಾಮ ಬಂದಿದೆ ಎಂಬ ಅಭಿಪ್ರಾಯವಿದೆ.

ಬ್ಯಾರಿ ಪುರುಷರು ಮನೆಯ ಹೊರಗಡೆ ಕೆಲಸ ಮಾಡುವುದು ಕಂಡು ಬರುತ್ತದೆ, ಅಂದರೆ ಮರದ ಮಿಲ್ಲು, ಕಲ್ಲಿನ ಕೋರೆ, ಮತ್ತಿತರ ಎಲ್ಲ ವರ್ಗದ ಕೆಲಸಗಳನ್ನು ಮಾಡುತ್ತಾರೆ. ಆದರೆ ಬ್ಯಾರಿ ಸ್ತ್ರೀಯರು ಮನೆಯ ಒಳಗಿದ್ದುಕೊಂಡು ಮಾಡಬಲ್ಲ ಕೆಲಸವಾದ ಬೀಡಿ ಕಟ್ಟುವುದರಲ್ಲಿ ತೊಡಗಿಸಿಕೊಂಡಿದ್ದಾರೆ. ೧೯೨೦ ರ ನಂತರ ಬೀಡಿ ಉದ್ಯಮ ಜನಪ್ರಿಯ ಕಸಬಾಗಿ ಬೆಳೆಯಿತಲ್ಲದೆ ಬ್ಯಾರಿ ಸ್ತ್ರೀಯರನ್ನು ಆಕರ್ಷಿಸಿತು. ಜಿಲ್ಲೆಯ ಮುಸ್ಲಿಮರಲ್ಲಿ ಶೇಕಾಡಾ ಎಂಬತ್ತರಷ್ಟು ಬ್ಯಾರಿಗಳು ಬೀಡಿ ಕಸಬನ್ನು ಕೈಗೆತ್ತಿಕೊಂಡಿದ್ದಾರೆ. ಕೆಲವು ಕಡೆ ಬ್ಯಾರಿ ಪುರುಷರು ಬೀಡಿ ಕಟ್ಟುತ್ತಾರೆ. ಮಂಗಳೂರು ಬೀಡಿಸ್ ಎಂದರೆ ಆದರಲ್ಲಿ ಬ್ಯಾರಿಗಳ ಪ್ರಾತ ಇದ್ದೆ ಇದೆ. ಸ್ವಂತ ಲೇಬಲ್ ಮತ್ತು ಲೈಸನ್ಸ್ ನಂಬ್ರ ಪಡೆದ ಸುಮಾರು ೧೮೯ ರಷ್ಟು ಬೀಡಿ ಉದ್ಯಮವು ಬ್ಯಾರಿಗಳ ಕೈಯಲ್ಲಿದೆ. ಬ್ಯಾರೀಸ್ ವೆಲ್ಫೇರ್ ಎಸೋಸಿಯೇಶನ್ ೧೯೯೨ ರಲ್ಲಿ ನಡೆಸಿದ ಸಮೀಕ್ಷಾ ವರದಿಯ ರಾಜ್ಯದ ೭೪,೮೦೫ ಮನೆ ಬೀಡಿಕಸಬಿನಲ್ಲಿ ತೊಡಗಿಸಿಕೊಂಡಿದೆ ಎಂದು ತಿಳಿಸುತ್ತದೆ. ಇತ್ತೀಚಿನ ದಿನಗಳಲ್ಲಿ ಬೀಡಿ ಉದ್ಯಮ ಹಲವಾರು ಕಾರಣದಿಂದ ನಶಿಸುತ್ತಿದೆ. ಈ

ಹಿನ್ನಲೆಯಲ್ಲಿ ಬ್ಯಾರಿ ಹುಡುಗಿಯರು ಹೊಲಿಗೆಯತ್ತ ಆಕರ್ಷಿತರಾಗಿದ್ದು ಹೊಲಿಗೆ ತರಬೇತಿ ಪಡೆಯುತ್ತಿರುವುದು ಕಂಡು ಬರುತ್ತದೆ. ಆದರೆ ಅದು ನಿರೀಕ್ಷಿತ ಮಟ್ಟದಲ್ಲಿಲ್ಲ ಅದರ ಜತೆಗೆ ಹುರಿಹಗ್ಗ ತಯಾರಿಯೂ ಬ್ಯಾರಿಗಳ ಗುಡಿ ಕಸಬಾಗುತ್ತಿದೆ. ಹಿಂದೆ ಬ್ಯಾರಿ ಹೆಂಗಸರು ಗದ್ದೆ ಕೆಲಸಕ್ಕೆ ಹೋಗುತ್ತಿದ್ದರು. ಆದರೆ ಇದೀಗ ಅದು ಕಡಿಮೆಯಾಗುತ್ತಿದೆ.

ಜವುಳಿ ವ್ಯಾಪಾರ, ಚಪ್ಪಲಿ ವ್ಯಾಪಾರ, ಅಡಿಕೆ ವ್ಯಾಪಾರ, ಹಣ್ಣು ಹಂಪಲು, ತರಕಾರಿ ವ್ಯಾಪಾರದಲ್ಲೂ ಬ್ಯಾರಿಗಳ ಪಾತ್ರವಿದೆ. ಹಿಂದೆ ಕೇವಲ ಅಂಗಡಿ ಅಥವಾ ಜಿನಸಿ ವ್ಯಾಪಾರದತ್ತ ಹೆಚ್ಚು ಆಸಕ್ತಿ ವಹಿಸುತ್ತಿದ್ದ ಬ್ಯಾರಿಗಳು ನಂತರ ಕೃಷಿಕ್ಷೇತ್ರದತ್ತವೂ ತಮ್ಮ ಆಸಕ್ತಿಯನ್ನು ಬೆಳೆಸಿಕೊಂಡರು. ಅಲ್ಲದೆ ಪ್ಲಾಸ್ಟಿಕ್ ಉದ್ದಿಮೆ ಮತ್ತು ಸಾಬೂನು ತಯಾರಿಕೆಯಲ್ಲೂ ಕಾರ್ಯನಿರ್ವಹಿಸುತ್ತಾರೆ.

ಬೆಂಗಳೂರಿನ ಬ್ಯಾರೀಸ್ ವೆಲ್ಫೇರ್ ಎಸೋಸಿಯೇಶನ್‌ರವರು ೧೬ ಸಾವಿರ ಬ್ಯಾರಿಗಳು ವ್ಯವಸಾಯ ಮತ್ತು ಕೂಲಿ ಕೆಲಸ, ೧೫ ಸಾವಿರ ಮಂದಿ ವಾಹನಚಾಲಕರಾಗಿ, ೨೦ ಸಾವಿರ ಮಂದಿ ಸಣ್ಣಪುಟ್ಟ ವ್ಯಪಾರದಲ್ಲಿ, ೧೧,೫೦೦ ಮಂದಿ ಮಧ್ಯಮ ಮಟ್ಟದ ವ್ಯಾಪಾರದಲ್ಲಿ, ಕೇವಲ ೫೦೦ ಮಂದಿ ದೊಡ್ಡ ಮಟ್ಟದ ವ್ಯಾಪಾರದಲ್ಲಿ ತೊಡಗಿಸಿ ಕೊಂಡಿದ್ದಾರೆ ಎಂದು ತಿಳಿಸುತ್ತಾರೆ[೩].

ಆಧುನಿಕ ಯುಗದಲ್ಲಿ ಬ್ಯಾರಿಗಳು ವ್ಯಾಪಾರಸ್ಥರು ಮಾತ್ರವಲ್ಲದೆ, ಇತರ ಕ್ಷೇತ್ರದಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಮಂಗಳೂರಿನ ಬ್ಯಾರಿಗಳು ವಿಧ್ಯಾಭ್ಯಾಸಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುವುದರಿಂದ ಬ್ಯಾರಿಗಳು ವಿದ್ಯಾವಂತರಾಗುತ್ತಿದ್ದಾರೆ, ಆ ಕಾರಣದಿಂದ ಕೆಲವರು ಡಾಕ್ಟರುಗಳಾಗಿ, ಇನ್ನು ಕೆಲವರು ಇಂಜನಿಯರಾಗಿ ತಮ್ಮ ವೃತ್ತಿಯನ್ನು ಮಾಡುತ್ತಿದ್ದಾರೆ. ಬ್ಯಾರಿಗಳು ಗಲ್ಫ್ ಉದ್ಯೋಗಕ್ಕೆ ಮಾರು ಹೋಗಿ, ಗಲ್ಫ್ ರಾಷ್ಟ್ರದಲ್ಲಿ ಬೇರೆ ಬೇರೆ ರೀತಿಯ ಉದ್ಯೋಗವನ್ನು ಮಾಡುತ್ತಿದ್ದಾರೆ. ಮಂಗಳೂರು, ಮುಲ್ಕಿಯಲ್ಲಿ ಹೂ ಮಾರಾಟ ಮಾಡುವವರೂ ಬ್ಯಾರಿಗಳಾಗಿದ್ದಾರೆ. ಒಂದು ಕಾಲಕ್ಕೆ ಪತ್ರಿಕೆ ಓದುವುದರಿಂದ ಹಿಡಿದು ಸಂಪೂರ್ಣ ಪತ್ರಿಕೋದ್ಯಮದತ್ತ ಹೆಚ್ಚು ಆಸಕ್ತಿವಹಿಸುತ್ತಿರುವುದು ಕಂಡು ಬರುತ್ತದೆ. ಬ್ಯಾರಿಗಳು

ಕೇವಲ ಬ್ಯಾರಿ ಭಾಷೆಯಲ್ಲಿ ಮಾತ್ರವಲ್ಲ ಕನ್ನಡದಲ್ಲೂ ಹಲವಾರು ಪತ್ರಿಕೆಗಳನ್ನು ಹೊರತಂದಿದ್ದಾರೆ. ಅದರ ಜತೆಗೆ ಇಂಗ್ಲಿಷ್ ಪತ್ರಿಕೆಗಳಲ್ಲೂ ಬ್ಯಾರಿಗಳೂ ಕಾಣಿಸಿಕೊಂಡಿದ್ದಾರೆ.

ಒಂದು ಕಾಲಕ್ಕೆ ಕೇವಲ ವ್ಯಾಪಾರಕ್ಕೆ ಮಾತ್ರ ಹೆಚ್ಚು ಒಲವು ತೋರುತ್ತಿದ್ದ ಬ್ಯಾರಿಗಳು ಇದೀಗ ಶಿಕ್ಷಣದ ಮಹತ್ವವನ್ನು ಅರಿತುಕೊಂಡು ಇತರ ಕ್ಷೇತ್ರದತ್ತವೂ ವಾಲುತ್ತಿದ್ದಾರೆ. ಅನೇಕ ಶಿಕ್ಷಣಕೇಂದ್ರಗಳನ್ನು ಸ್ಥಾಪಿಸಿ ಶಿಕ್ಷಣ ರಂಗಕ್ಕೂ ತಮ್ಮ ಕೊಡುಗೆಯನ್ನು ಬ್ಯಾರಿಗಳು ನೀಡುತ್ತಿದ್ದಾರೆ. ಬ್ಯಾರಿಗಳು ಬ್ರಿಟಿಷ್ ಸರ್ಕಾರವಿದ್ದಾಗಲೇ ಸರ್ಕಾರಿ ಕ್ಷೇತ್ರದಲ್ಲಿ ಹೆಸರುಗಳಿಸಿದ್ದಾರೆ. ಸರ್ಕಾರದ ವಿವಿಧ ಇಲಾಖೆಗಳಲ್ಲಿ ದುಡಿದ ಅನುಭವ ಬ್ಯಾರಿಗಳಿಗಿದೆ. ಈಗಲೂ ಕೇಂದ್ರ ಮತ್ತು ರಾಜ್ಯ ಸರ್ಕಾರದ ಹಲವಾರು ಇಲಾಖೆಗಳಲ್ಲಿ ಬ್ಯಾರಿಗಳು ಸೇವೆ ಸಲ್ಲಿಸುತ್ತಿದ್ದರೆ, ಬ್ಯಾರಿ ಹೆಂಗಸರು ಉಪನ್ಯಾಸಕಿಯರಾಗಿ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಆದ ಕಾರಣ ಈಗ ಬ್ಯಾರಿಗಳ ಮುಖ್ಯವೃತ್ತಿ ವ್ಯಾಪಾರ ಎಂದರೆ ತಪ್ಪಾಗಬಹುದು. ಯಾಕೆಂದರೆ ವ್ಯಾಪಾರ ವಹಿವಾಟುಗಳು ರಕ್ತಗತವಾಗಿದ್ದರೂ, ಇನ್ನೂ ಹಲವಾರು ಕ್ಷೇತ್ರದಲ್ಲಿ ಬೇರೆ ಬೇರೆ ವೃತ್ತಿಗಳನ್ನು ಮಾಡಿ ತಮ್ಮ ಕೊಡುಗೆಯನ್ನು ಬ್ಯಾರಿಗಳು ನೀಡುತ್ತಿದ್ದಾರೆ.

## ೪.೩ ಸಾಮಾಜಿಕ ಬದಲಾವಣೆಯಲ್ಲಿ ಆರ್ಥಿಕ ವಿಚಾರಗಳ ಪಾತ್ರ

ಬ್ಯಾರಿ ಜನಾಂಗದಲ್ಲಿ ಬಡತನದ ಪರಿಕಲ್ಪನೆ ಭಿನ್ನವಾಗಿದೆ ಬ್ಯಾರಿ ಸಮುದಾಯದ ಬಹುತೇಕ ಮಂದಿ ಅವಶ್ಯಕ ಖರ್ಚುಗಳಾದ ಕುಟುಂಬದ ಪ್ರಾಥಮಿಕ ಅಗತ್ಯಗಳ ಪೂರೈಕೆ, ಶಿಕ್ಷಣ ಮತ್ತು ಸಾಮಾಜಿಕ ಬದ್ಧತೆಗಳಿಗೆ ವಿನಿಯೋಗಿಸುವುದರ ಬದಲು, ಅನಾವಶ್ಯಕ ಖರ್ಚು ಮತ್ತು ದುಂದುವೆಚ್ಚಗಳಿಗೆ ತಮ್ಮ ಸಂಪಾದನೆಯ ಬಹುಪಾಲನ್ನು ಖರ್ಚು ಮಾಡುತ್ತಾರೆ. ಇದರಿಂದಾಗಿ ಈ ಸಮುದಾಯದ ಬಹುತೇಕ ಮಂದಿ ಬಡತನವನ್ನು ಹೊಂದಿರುತ್ತಾರೆ. ದುಡಿಮೆಯ ಬಗ್ಗೆ ಬ್ಯಾರಿ ಸಮುದಾಯದಲ್ಲಿ ಅನಾಸಕ್ತಿ ಕಂಡುಬರುತ್ತದೆ. ಕುಟುಂಬದಲ್ಲಿ ಒಬ್ಬಿಬ್ಬರ ದುಡಿಮೆಯ ಸಂಪಾದನೆಯ ಮೇಲೆ ಇತರರು ಅವಲಂಬಿತರಾಗಿರುವ ಅದೆಷ್ಟೋ ಉದಾಹರಣೆಗಳಿವೆ. ವಿದ್ಯೆಯ ಅಭಾವದಿಂದಾಗಿ, ತನ್ನ ಹೊಣೆಗಾರಿಕೆಯನ್ನು ಅರಿತುಕೊಳ್ಳದೆ, ಇತರರ ಸಂಪಾದನೆಯಲ್ಲಿ ಜೀವನ ಸಾಗಿಸಲು ಸ್ವಾಭಿಮಾನದ ಪ್ರಶ್ನೆ ಬರುವುದಿಲ್ಲ. ಮಧ್ಯ

ವಯಸ್ಸು ದಾಟಿದ ಮೇಲಂತೂ ಅಧಿಕ ಮಂದಿ ಪರಾವಲಂಬಿಗಳಾಗಿರುತ್ತಾರೆ. ಇದಕ್ಕೆ ಕಾರಣ ಬ್ಯಾರಿಗಳು ತಮ್ಮ ಕೆಟ್ಟ ಚಟಗಳಿಂದಾಗಿ ಬೇಗನೆ ಆರೋಗ್ಯ ಕಳೆದುಕೊಂಡು, ದುಡಿಯಲು ಮನಸ್ಸಿದ್ದರೂ, ದುಡಿಯಲು ಸಾಧ್ಯವಿಲ್ಲದವರಾಗಿರುವುದು. ಈ ಮೂಲಕ ಒಬ್ಬಬ್ಬರ ದುಡಿಮೆಯಲ್ಲಿ ಕುಟುಂಬವು ಅವಲಂಬಿತರಾಗುವುದರಿಂದ, ಇಡೀ ಕುಟುಂಬದ ಆರ್ಥಿಕ ವ್ಯವಸ್ಥೆಯೇ ಸಮತೋಲನ ತಪ್ಪುತ್ತದೆ. ಗಲ್ಫ್ ದೇಶಕ್ಕೆ ಯುವಕರು, ಉದ್ಯೋಗ ನಿಮಿತ್ತ ವಲಸೆ ಆರಂಭಿಸಿದ ಮೇಲಂತೂ, ಮನೆಯ ಹಿರಿಯರು ಸ್ವಯಂಘೋಷಿತ ನಿವೃತ್ತಿ ಜೀವನವನ್ನು ನಡೆಸಲು ಆರಂಭಿಸಿ ತಮ್ಮ ಗಳಿಕೆಯ ಶಕ್ತಿಯನ್ನು ಕಳೆದುಕೊಂಡವರಂತಾಗಿದ್ದಾರೆ.

## ಸಾಂಪ್ರದಾಯಿಕ ವ್ಯಾಪಾರ, ಕಸುಬು ಉದ್ಯಮಗಳಿಗೆ ಶರಣು

ಈ ಪ್ರವೃತ್ತಿಯು ಕೂಡಾ ಬ್ಯಾರಿಸಮುದಾಯದ ಆರ್ಥಿಕ ಸ್ಥಿತಿಗಳ ಮೇಲೆ ಪರಿಣಾಮವನ್ನು ಬೀರಿದೆ. ಬ್ಯಾರಿಗಳು ಹೆಚ್ಚಾಗಿ ಸಾಂಪ್ರಾದಾಯಿಕ ಮತ್ತು ತಮ್ಮ ಹಿರಿಯರು ಮಾಡಿದಂತಹ ವ್ಯಾಪಾರ, ಕಸುಬು ಮತ್ತು ಉದ್ಯಮಗಳನ್ನು ಅವಲಂಬಿಸುತ್ತಾರೆ. ಈ ವೈಜ್ಞಾನಿಕ ಯುಗದಲ್ಲಿ ಜಗತ್ತು ಮಹತ್ತರ ಬದಲಾವಣೆ ಕಂಡಂತೆಯೇ ವ್ಯಾಪಾರ ಉದ್ಯಮಗಳಲ್ಲೂ ಮಹತ್ತರ ಕ್ರಾಂತಿಯಾಗಿದೆ. ಆದರೆ ಬ್ಯಾರಿ ಜನಾಂಗದ ಬಹುತೇಕ ಮಂದಿ ಈ ಬದಲಾವಣೆಗೆ ಸ್ಪಂದಿಸಲು ಇನ್ನು ಮಾನಸಿಕವಾಗಿ ತಯಾರಾಗಿಲ್ಲ. ಈ ಪ್ರವೃತ್ತಿಗೆ ವಿಧ್ಯಾಭ್ಯಾಸದ ಕೊರತೆಯೂ ಕಾರಣವಾಗಿದೆ.

ಬ್ಯಾರಿ ಸಮುದಾಯದ ಸಾಂಪ್ರದಾಯಿಕ ಕಸುಬುಗಳೆಂದರೆ ಬೀಡಿಕಟ್ಟುವುದು, ಅದರ ಗುತ್ತಿಗೆ, ಬೀಡಿ ತಯಾರಿಸಿ ಸ್ಥಳೀಯ ಮಾರಾಟ, ಜೀನಸು ವ್ಯಾಪಾರ, ಮೀನು ಶೇಖರಣೆ ಮತ್ತು ವಿತರಣೆ ಕೃಷಿ ಉತ್ಪನ್ನಗಳನ್ನು ಖರೀದಿಸಿ ಮಾರುವುದು, ಮರದ ವ್ಯಾಪಾರ ಹಣ್ಣು ಹಂಪಲು ಮತ್ತು ಗುಜರಿ ವ್ಯಾಪಾರ ಮರದ ಮಿಲ್ಲುಗಳು, ಹಂಚಿನ ವ್ಯಾಪಾರ, ಇತ್ತೀಚೆಗೆ ಕೆಲವರು ಇತರ ಕೈಗಾರಿಕೆಗಳನ್ನು ಸ್ಥಾಪಿಸಿದರೂ ಅದರಲ್ಲಿ ಹೇಳಿಕೊಳ್ಳುವಂತಹ ಪ್ರಗತಿ ಕಂಡಿಲ್ಲ.

## ಕಛೇರಿ ಉದ್ಯೋಗಗಳಲ್ಲಿ ಅನಾಸಕ್ತಿ

ಬ್ಯಾರಿಜನಾಂಗದವರು ಸರಕಾರಿ, ಅರೆಸರಕಾರಿ ಮತ್ತು ಖಾಸಗಿ ಸಂಸ್ಥೆಗಳ ಕಛೇರಿಯಲ್ಲಿ ದುಡಿಯಲು ಹಿಂಜರಿಯುತ್ತಾರೆ. ಇದಕ್ಕೆ ಕಾರಣ ಶಿಕ್ಷಣದಲ್ಲಿ ಹಿಂದುಳಿಯುವಿಕೆ. ಈ ಸರಕಾರಿ ಉದ್ಯೋಗದಲ್ಲಿ ಸಿಗುವ ಸಂಪಾದನೆಯು ಶಾಶ್ವತವಾಗಿದ್ದು, ಇಂತಹ ಸಂಪಾದನೆಯು ಒಂದು ನಿರ್ದಿಷ್ಟ ಪ್ರಮಾಣದಲ್ಲಿದ್ದರೆ ಆ ಜನಾಂಗದ ಆರ್ಥಿಕ ಸ್ಥಿತಿಯು ಹೆಚ್ಚು ಏರುಪೇರುಗಳಿಲ್ಲದೆ ಇರುವುದು. ಆದರೆ ಬ್ಯಾರಿ ಜನಾಂಗದಲ್ಲಿ ಈ ಗುಂಪಿನವರು ಅತಿ ನಗಣ್ಯ ಮಟ್ಟದಲ್ಲಿರುವುದರಿಂದ ಈ ಜನಾಂಗದ ಆರ್ಥಿಕ ಪರಿಸ್ಥಿತಿಯ ಮೇಲೆ ಬಹಳ ಕೆಟ್ಟ ಪರಿಣಾಮವಾಗಿದೆ.

ಇತ್ತೀಚೆಗೆ ಈ ಎಲ್ಲಾ ಸಮಸ್ಯೆಗಳು ಕಡಿಮೆಯಾಗಿ ಸಾಮಾಜಿಕ ಬದಲಾವಣೆಯಾಗಿದೆ. ಏಕೆಂದರೆ ಬ್ಯಾರಿ ಸಮುದಾಯವು ಹಲವಾರು ಶಿಕ್ಷಣ ಸಂಸ್ಥೆಗಳನ್ನು, ಆಸ್ಪತ್ರೆಗಳನ್ನು, ಸಂಘಗಳನ್ನು ತೆರೆದಿದ್ದಾರೆ. ಯಾವುದೇ ಜನಾಂಗವು ಮುಂದುವರಿಯಬೇಕಾದರೆ ಶಿಕ್ಷಣದಲ್ಲಿ ಮುಂದುವರಿಕೆಯಾಗಬೇಕು ತಮ್ಮ ಜನಾಂಗದ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶಿಕ್ಷಣ ಸಂಸ್ಥೆಯನ್ನು ತೆರೆದರೆ, ಆ ಜನಾಂಗದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

ಬ್ಯಾರಿ ಸಮುದಾಯದಲ್ಲಿ ಇತ್ತೀಚೆಗೆ ಗಲ್ಫ್‌ರಾಷ್ಟ್ರಗಳಲ್ಲಿ ದೊರಕುವ ಉದ್ಯೋಗದ ಆಕರ್ಷಣೆ ಹೆಚ್ಚಾಗಿದೆ. ಗಲ್ಫ್ ರಾಷ್ಟ್ರಗಳಲ್ಲಿ ಸುಲಭದಲ್ಲಿ ಸಿಗುವ ಉದ್ಯೋಗ ಹಾಗೂ ವೇತನದ ಆಕರ್ಷಣೆಯಿಂದಾಗಿ ಬ್ಯಾರಿ ಸಮುದಾಯದ ಯುವಕರು ಬಹಳಷ್ಟು ಆಕರ್ಷಿತರಾಗಿದ್ದಾರೆ. ಗಲ್ಫ್ ರಾಷ್ಟ್ರದ ವಲಸೆಯಿಂದಾಗಿ ಹಲವಾರು ಕುಟುಂಬಗಳು ಆರ್ಥಿಕವಾಗಿ ಸುಧಾರಣೆಯಾದುದು ಕಂಡು ಬಂದರೂ, ಹಲವಾರು ಸಮಸ್ಯೆಗಳು ತಲೆದೋರಿವೆ.

ಬ್ಯಾರಿ ಯುವಕರು ಗಲ್ಫ್ ರಾಷ್ಟ್ರದಲ್ಲಿ ಸಿಗುವ ನೌಕರಿಯ ಹಾಗೂ ಅದರಲ್ಲಿ ಸಿಗುವ ಅಧಿಕ ವೇತನದ ಲಾಲಸೆಯಿಂದಾಗಿ ಶಿಕ್ಷಣವನ್ನು ಪೂರ್ಣಗೊಳಿಸದೆ ಅರ್ಧದಲ್ಲೇ ಮೊಟಕುಗೊಳಿಸಿ ಗಲ್ಫ್ ರಾಷ್ಟ್ರಗಳಿಗೆ ಹೋಗುವುದು ಸರ್ವೇ ಸಾಮಾನ್ಯವಾದುದರಿಂದ ಶಿಕ್ಷಣ ಪಡೆದ ಬ್ಯಾರಿ ಹುಡುಗರ ಸಂಖ್ಯೆ ಕಡಿಮೆಯಾಗಿದೆ. ಹೀಗಾಗಿ ಬ್ಯಾರಿ ಜನಾಂಗವು ಶಿಕ್ಷಣದಲ್ಲಿ

ಹಿಂದೆ ಬಿದ್ದು, ಸಮಾಜದಲ್ಲಿ ಅತೀ ಹೀನಾಯುವಾಗಿ ಬದುಕುವಂತಹ ಪರಿಸ್ಥಿತಿ ಮುಂದೆ ಎದುರಾಗಬಹುದಾದ ಭೀತಿ ಇಂದು ಸಮಾಜವನ್ನು ಕಾಡುತ್ತಿದೆ.

ಹಿಂದೆ ಬ್ಯಾರಿ ಸಮಾಜದಲ್ಲಿ ಬಡವ ಬಲ್ಲಿದ ಎರಡು ಗುಂಪುಗಳಿದ್ದರೂ, ಆ ಎರಡೂ ಗುಂಪುಗಳು ತಮ್ಮಲ್ಲಿ ಒಂದು ರೀತಿಯ ಸಮತೋಲನವನ್ನು ಕಾಪಾಡಿಕೊಂಡು, ಸಮಾಜದಲ್ಲಿ ಒಬ್ಬರಿಗೊಬ್ಬರು ಸಹಕರಿಸಿ ಹೊಂದಿಕೊಂಡು ಶಾಂತಿಯಿಂದ ಜೀವನ ನಡೆಸುತ್ತಿದ್ದರು. ಬಡವ ಬಲ್ಲಿದರೆಂಬ ಭೇದವಿರಲಿಲ್ಲ ಆದರೆ ಇತ್ತೀಚೆಗೆ ಅರ್ಹತೆ ಇಲ್ಲದಿದ್ದರೂ ಶ್ರೀಮಂತಿಕೆಯ ಪ್ರಭಾವದಿಂದ ಸಮಾಜದಲ್ಲಿ ಉನ್ನತ ಸ್ಥಾನಕ್ಕೆ ಏರಬೇಕೆಂಬ ಮಹತ್ವಾಕಾಂಕ್ಷೆಯು ಹೆಚ್ಚಾದುದರಿಂದ ಅದುವರೆಗೂ ಸಹಬಾಳ್ವೆಯನ್ನು ನಡೆಸಿಕೊಂಡು ಬರುತ್ತಿದ್ದ ಸಮುದಾಯದಲ್ಲಿ ಅಶಾಂತಿ ಹೆಚ್ಚಾಗಿ ಸಾಮಾಜಿಕ ಅಸಮತೋಲನ ಮುಂದುವರಿದಿದೆ ಈ ಅಸಮತೋಲನದಿಂದ ಗುಂಪುಗಳು ಹುಟ್ಟಿಕೊಳ್ಳಬಹುದು.

ಗಲ್ಫ್ ರಾಷ್ಟ್ರಕ್ಕೆ ಬ್ಯಾರಿ ಯುವಕರ ಮತ್ತು ವಿವಾಹಿತರ ವಲಸೆಯಿಂದಾಗಿ ಕ್ಷಣಿಕ ಸಂಪತ್ತಿನ ಲಾಲಸೆಯಿಂದಾಗಿ ಶಾಶ್ವತವಾಗಿರತಕ್ಕಂತಹ ಸಾಂಸಾರಿಕ ಕೌಟುಂಬಿಕ ಜೀವನವನ್ನೇ ಕಡೆಗಣಿಸಿದಂತಾಗಿದೆ. ಭವಿಷ್ಯದಲ್ಲಿ ಇದು ಗಾಢದೂರಗಾಮಿ ಪರಿಣಾಮವನ್ನು ಬೀರಬಲ್ಲದ್ದಾಗಿದೆ. ತಮ್ಮ ಪತ್ನಿ, ಮಕ್ಕಳು, ವೃದ್ಧ ಮಾತಾಪಿತರುಗಳಿಂದ ದೂರವಾಗಿ, ಅಗತ್ಯಬಿದ್ದಾಗ ಕೂಡಲೇ ಹಿಂದಿರುಗಿ ಬರಲಿಕ್ಕಾಗದಂತಹ ದೂರದ ದೇಶದಲ್ಲಿದ್ದು, ಊರಿನಲ್ಲಿರುವ ತಮ್ಮ ಕುಟುಂಬದ ಆಗುಹೋಗುಗಳಲ್ಲಿ ಭಾಗವಹಿಸಲು ಅಸಾಧ್ಯವಾಗಿದೆ. ಮಕ್ಕಳಿಗೆ ಸರಿಯಾದ ಶಿಕ್ಷಣವಿಲ್ಲದೆ ತಂದೆಯ ಹಿಡಿತ ಮಕ್ಕಳ ಮೇಲೆ ಇಲ್ಲದ ಕಾರಣ ಎಷ್ಟೋ ಎಳೆಯರು ದಾರಿ ತಪ್ಪಿದವರಿದ್ದಾರೆ. ಕೆಲವು ಸಂದರ್ಭಗಳಲ್ಲಂತೂ ವಿವಾಹವಾಗಿ ಒಂದೆರಡು ವಾರಗಳಲ್ಲೇ ಗಂಡನು ತನ್ನ ಪತ್ನಿಯನ್ನು ಬಿಟ್ಟು ವಿದೇಶಕ್ಕೆ ಹೋದ ನಿದರ್ಶನವೂ ಇದೆ. ಈ ಪರಿಸ್ಥಿತಿಯಲ್ಲಿ ಗಂಡ ಹೆಂಡಿರ ಪರಿಸ್ಥಿತಿಯನ್ನಂತು ಊಹಿಸಲಿಕ್ಕೂ ಸಾಧ್ಯವಾಗುವುದಿಲ್ಲ. ಇಂತಹ ಪ್ರಕರಣಗಳಿಂದಾಗಿ ಅನೇಕ ನವವಿವಾಹಿತ ಯುವತಿಯರು ಇತರ ಯುವಕರೊಡನೆ ಸ್ನೇಹಸಲಿಗೆಯಿಂದ ಇದ್ದು ಬೇಡದ ಸಂಬಂಧವನ್ನೂ ಇಟ್ಟುಕೊಳ್ಳುತ್ತಾರೆ. ಅಷ್ಟೇ ಅಲ್ಲದೆ ಗಂಡ ಗಲ್ಫ್ ರಾಷ್ಟ್ರದಲ್ಲಿ ವರ್ಷ ಇಡೀ ದುಡಿದು ಹಣಕಳುಹಿಸಿದಾಗ, ಊರಿನಲ್ಲಿ ಹೆಂಡತಿ ಹಣದ

ಉಳಿತಾಯ ಮಾಡುವುದು ಬಿಟ್ಟು, ದುಂದುವೆಚ್ಚಮಾಡಿ ಹಣಪೋಲುಮಾಡುವುದು ಸಾಮಾನ್ಯವಾಗಿದೆ. ಕೆಲವು ಯುವತಿಯರು ಮಾನಸಿಕ ಸ್ಥಿಮಿತ ಕಳಕೊಂಡ ನಿದರ್ಶನಗಳೂ ಇವೆ. ಕೆಲವರು ಸರಿಯಾಗಿ ಇದ್ದಂತೆ ಕಂಡರೂ ಯಾವುದೇ ಕೆಲಸಕಾರ್ಯಗಳಲ್ಲಿ ಉತ್ಸಾಹ ತೋರದೆ ನಿರ್ವಿಣ್ಣತೆಯಿಂದ ಇರುವುದನ್ನು ಕಾಣಬಹುದು. ವೃದ್ಧಮಾತಾಪಿತರೂ ಕೂಡ ತಮ್ಮ ಅಂತಿಮಕಾಲದಲ್ಲಿ ಮಕ್ಕಳನ್ನು ಕಾಣಲಾಗದೆ, ಕೊರಗುವುದೂ ಸಾಮಾನ್ಯವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ, ಕುಟುಂಬದ ಯಜಮಾನನು ಬಹಳ ದೂರ ಹೋಗಿ ತನ್ನ ಕುಟುಂಬವನ್ನು ಬಹಳ ಸಮಯದವರೆಗೆ ಬಿಟ್ಟಿರುವುದರಿಂದ ಕುಟುಂಬದ ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಮತ್ತು ನೈತಿಕ ಮೌಲ್ಯಗಳ ಮೇಲೆ ಭಾರೀ ಲೋಪವಾಗುತ್ತದೆ.

ಬ್ಯಾರಿ ಯುವಕರಲ್ಲಿ ಅನೇಕರು ಗಲ್ಫ್ ರಾಷ್ಟ್ರಕ್ಕೆ ಹೋಗಿ ನೆಲೆಸುವುದರಿಂದಾಗಿ, ಬ್ಯಾರಿಗಳಲ್ಲಿ ಯುವಶಕ್ತಿಯ ಕೊರತೆ ಅತಿಯಾಗಿದೆ ಇದು ಬ್ಯಾರಿಗಳ ಸಾಮಾಜಿಕ, ಧಾರ್ಮಿಕ ಜೀವನದ ಮೇಲೆ ಬಹಳ ದುಷ್ಪರಿಣಾಮವನ್ನು ಬೀರಿದೆ. ಬ್ಯಾರಿ ಜನಾಂಗದ ಮನೆಯಲ್ಲಿ ನಡೆಯುವ ಒಳಿತು ಕೆಡುಕುಗಳಿಗೆ ಯುವಕರು ಲಭ್ಯವಿಲ್ಲದೆ ತುಂಬಾ ಅಸಹಾಯಕ ಸ್ಥಿತಿಯುಂಟಾಗಿದೆ ಯಾವುದೇ ಜನಾಂಗದಲ್ಲಿ ಎಷ್ಟೆ ಸಂಪತ್ತು ಇದ್ದರೂ ಯುವಶಕ್ತಿ ಇಲ್ಲದಿದ್ದರೆ ಅದೊಂದು ಗಂಭೀರ ಕೊರತೆಯಾಗುವುದು. ಬ್ಯಾರಿ ಜನಾಂಗದಲ್ಲಿ ಬರೇ ಎಳೆಯರು ಮತ್ತು ಹಿರಿಯರೇ ಸಮಾಜದಲ್ಲಿ ಕಂಡುಬಂದು ಯುವಕರ ಕೊರತೆಯುಂಟಾಗಿದೆ ಯುವಶಕ್ತಿಯು ಒಂದು ಜನಾಂಗದ ಪ್ರತೀಕವಾಗಿದೆ.

ಹಿಂದೆ ಬ್ಯಾರಿಗಳು ತಮ್ಮ ನೀತಿಯುತ ನಡವಳಿಕೆಗಳಿಂದಾಗಿ ಸಮಾಜದಲ್ಲಿ ಗಣನೀಯ ಸ್ಥಾನಮಾನ ಹೊಂದಿದ್ದಾರೆಂದು ಬ್ಯಾರಿಗಳ ಚರಿತ್ರೆಯಿಂದ ತಿಳಿದುಬರುತ್ತದೆ. ಆದರೆ ಬದಲಾಗುತ್ತಿರುವ ಬ್ಯಾರಿಗಳ ಜೀವನ ಶೈಲಿ ನೈತಿಕತೆಯ ಮೇಲೆ ಗಾಢವಾದ ಪರಿಣಾಮವನ್ನು ಬೀರಿದೆ. ಬ್ಯಾರಿ ಸಮುದಾಯದ ಕೆಲವರಲ್ಲಿ ವಿಷಯ ಲೋಲುಪತೆ, ವ್ಯಾಪಾರ ವ್ಯವಹಾರಗಳಲ್ಲಿ ಕಂಡುಬರುವ ಅಶಿಸ್ತು ಮತ್ತು ಪರಿಸರ ನೈರ್ಮಲ್ಯವನ್ನು ಕಾಪಾಡದಿರುವಿಕೆಯಿಂದ ಇಡೀ ಸಮುದಾಯಕ್ಕೆ ಕೆಟ್ಟ ಹೆಸರು ಬರುತ್ತಿದೆ.

ಇತ್ತೀಚೆಗೆ ಬ್ಯಾರಿಗಳ ಗಂಡು ಹಾಗೂ ಹೆಣ್ಣು ಮಕ್ಕಳು ವಿದ್ಯಾಭ್ಯಾಸ ಪಡೆಯುತ್ತಿದ್ದಾರೆ. ಮಂಗಳೂರಿನಲ್ಲಿ ಹೆಚ್ಚು ಬ್ಯಾರಿಗಳು ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಪದವಿ ಪಡೆದು ಉದ್ಯೋಗದಲ್ಲಿಯೂ ಇದ್ದಾರೆ. ಈಗಿನ ಸಾಮಾಜಿಕ ಜೀವನದ ಬದಲಾವಣೆಯು ಆರ್ಥಿಕ ಕಾರಣಗಳಿಂದ ಪ್ರಾರಂಭವಾಗಿದೆ. ಯಾಕೆಂದರೆ ಪ್ರತಿಯೊಂದು ಮನೆಯಲ್ಲಿ ಒಬ್ಬರು ಅಥವಾ ಇಬ್ಬರು ಇನ್ನು ಕೆಲವು ಮನೆಯಲ್ಲಿ ಐದು ಗಂಡು ಮಕ್ಕಳಿದ್ದರೆ ಐವರೂ ಗಲ್ಫ್ ರಾಷ್ಟ್ರಕ್ಕೆ ಹೋಗಿ ದುಡಿಯುವುದರಿಂದ ಆರ್ಥಿಕವಾಗಿ ಪ್ರತಿಯೊಂದು ಮನೆಯಲ್ಲಿ ತೊಂದರೆಗಳಿಲ್ಲ. ಗಲ್ಫ್ ರಾಷ್ಟ್ರದಲ್ಲಿ ದುಡಿದು ಹಣಕಳುಹಿಸಿ ಊರಿನಲ್ಲಿ ದೊಡ್ಡ ದೊಡ್ಡ ಮನೆಗಳನ್ನು ಕಟ್ಟಿ, ಹೆಣ್ಣು ಮಕ್ಕಳಿದ್ದರೆ ಅವರ ಮದುವೆ ಆಡಂಬರದಿಂದ ಮಾಡುವುದು ಇತ್ತೀಚಿನ ಪದ್ಧತಿಯಾಗಿದೆ. ಈ ಆರ್ಥಿಕ ಕಾರಣದಿಂದಾಗಿ ದುಂದುವೆಚ್ಚ ಮತ್ತು ಅನಾವಶ್ಯಕ ಖರ್ಚುಗಳನ್ನು ಮಾಡುವುದು ಬ್ಯಾರಿ ಸಮುದಾಯದಲ್ಲಿ ಸರ್ವೆ ಸಾಮಾನ್ಯ. ಉಳಿದ ಸಮುದಾಯದವರು ಉಡುಪು ಖರೀದಿಸುವಾಗ ತಮಗೆ ಸಾಧ್ಯವಿದ್ದರೂ ಹೆಚ್ಚು ಖರ್ಚುಮಾಡದೆ ಉಡುಪು ತೊಡುತ್ತಾರೆ. ಬ್ಯಾರಿಗಳು ತಮ್ಮಲ್ಲಿರುವ ಹಣವನ್ನೆಲ್ಲಾ ಉಡುಗೆ ತೊಡುಗೆಗೆ ಖರ್ಚುಮಾಡುವುದು ಕಾಣಬಹುದು. ಆರ್ಥಿಕ ಪರಿಸ್ಥಿತಿಯು ಉತ್ತಮವಾದ ಕಾರಣ ಸಾಮಾಜಿಕ ಜೀವನದಲ್ಲಿ ಸಮಾನತೆ, ಸಹಬಾಳ್ವೆ, ಪ್ರೀತಿ, ವಾತ್ಸಲ್ಯಗಳು ಕಡಿಮೆಯಾಗಿದೆ. ಅಷ್ಟೇ ಅಲ್ಲದೆ ಗಲ್ಫ್ ರಾಷ್ಟ್ರದಲ್ಲಿ ದುಡಿಯುವವರು, ಹೆಣ್ಣು ಮಕ್ಕಳ ಮದುವೆ ಮಾಡುವಾಗ, ಅತಿಯಾದ ವರದಕ್ಷಿಣೆಕೊಡುವ ಕಾರಣ, ಬಡವರಾದರೆ ಮದುವೆ ವಯಸ್ಸಿಗೆ ಬಂದಂತಹ ಯುವತಿಯರು ವರದಕ್ಷಿಣೆ ನೀಡಲು ಅವರ ಹೆತ್ತವರು ಅಸಹಾಯಕರಾದುದರಿಂದ, ಮದುವೆಯಾಗದೆ ಉಳಿದ ಹೆಣ್ಣುಮಕ್ಕಳನ್ನು ಬ್ಯಾರಿ ಸಮಾಜದಲ್ಲಿ ನಾವು ಕಾಣಬಹುದಾಗಿದೆ. ಸಾಧಾರಣ ವರಮಾನದ ವರನು ತನ್ನ ವರಮಾನದಿಂದ ಈಗಿನ ಆಡಂಬರದ ರೀತಿಯ ಮದುವೆ ಸಮಾರಂಭಗಳನ್ನು ನಡೆಸಲು ಶಕ್ತನಿರುವುದಿಲ್ಲ. ಆದರೆ ಕಡಿಮೆ ಖರ್ಚು ಮಾಡಲು ಮನಸ್ಸಿದ್ದರೂ ಈಗಿನ ಸಾಮಾಜಿಕ ರೀತಿನೀತಿಗಳು ಬಿಡುವುದಿಲ್ಲ. ಆದುದರಿಂದ ಅವನು ಆಡಂಬರದ ಮದುವೆ ಸಮಾರಂಭವನ್ನೇ ತನಗೆ ಮನಸ್ಸಿಲ್ಲದಿದ್ದರೂ ನಡೆಸಬೇಕಾಗುತ್ತದೆ. ಆದರೆ ಇದಕ್ಕೆ ತಕ್ಕಂತಹ ಸಂಪನ್ಮೂಲಗಳು ಅವನಲ್ಲಿ ಇರುವುದಿಲ್ಲವಾದುದರಿಂದ ಅವನು ವರದಕ್ಷಿಣೆಗೆ ಮೊರೆಹೋಗಲೇಬೇಕಾಗುತ್ತದೆ.

ಹಿಂದೆ ಬ್ಯಾರಿಗಳು ಅವಿಭಜಿತ ಕುಟುಂಬಸ್ಥರಾಗಿದ್ದರು. ಈಗ ಅವಿಭಜಿತ ಕುಟುಂಬ ಕಡಿಮೆಯಾದ ಕಾರಣ, ಬ್ಯಾರಿ ಸಮುದಾಯದಲ್ಲಿ ಇರತಕ್ಕಂತ ಸಮಾನತೆ, ಸಹೋದರತೆ, ಪ್ರೀತಿ, ವಾತ್ಸಲ್ಯಗಳು ನಶಿಸುತ್ತಾ ಇವೆ. ಇದಕ್ಕೆಲ್ಲಾ ಸಾಮಾಜಿಕ ಜೀವನದಲ್ಲಾದ ಬದಲಾವಣೆಯೇ ಕಾರಣ. ಮೊದಲು ರಂಜಾನ್ ತಿಂಗಳಲ್ಲಿ ಕೊಡುವ ಜಕಾತ್ ಅಮೂಲ್ಯವಾದ ಮೌಲ್ಯದಿಂದ ಕೂಡಿತ್ತು. ಈಗ ಅದರ ಪ್ರಾಮುಖ್ಯತೆ ಕಡಿಮೆಯಾಗಿದೆ, ಏಕೆಂದರೆ ರಂಜಾನ್ ತಿಂಗಳಲ್ಲಿ ಹಲವರು ಪ್ರತಿಯೊಂದು ಮುಸ್ಲಿಂ ಮನೆಗೆ ಹೋಗಿ ಅವರು ಕೊಡುವ ಎರಡು ಅಥವಾ ಐದು ರೂಪಾಯಿಗೆ ಕೈಚಾಚುವರು. ಆ ಹಣದಿಂದ ಅವರಿಗೆ ಅಷ್ಟೇನೂ ಲಾಭವಾಗದಿದ್ದರೂ, ಬರಿಹೊಟ್ಟೆಯಲ್ಲಿ ಬಿಸಿಲಿನ ದಗೆಯಲ್ಲಿ ನಡೆದುಕೊಂಡು ಹೋಗಿ ಹಣಸಂಗ್ರಹಿಸುತ್ತಾರೆ. ಆದರೆ ಜಕಾತ್ ಎಂದರೆ ತನ್ನಲ್ಲಿರುವ ಸಂಪತ್ತಿನ ಒಂದು ಭಾಗವನ್ನು ಬಡವರ ಮನೆಗೆ ಹೋಗಿ ಕೊಡಬೇಕು, ಅಷ್ಟೇ ಅಲ್ಲದೆ ಅಕ್ಕಿ, ಧಾನ್ಯ ಹಣ್ಣು ಹಂಪಲು ಮತ್ತು ಬಟ್ಟೆ ಬರೆಗಳನ್ನು ದಾನ ಮಾಡಬೇಕು. ಈಗ ಹಳೆ ಬಟ್ಟೆಗಳನ್ನು ದಾನ ಮಾಡುವುದು, ಶ್ರೀಮಂತರ ಮನೆಗೆ ಹೋಗಿ ಬೆಳಗ್ಗಿನಿಂದ ಸಾಯಂಕಾಲದವರೆಗೂ ಅವರು ಕೊಡುವ ಐದು ರೂಪಾಯಿಗೆ ಕಾದು ನಿಲ್ಲುವುದು ರೂಡಿಯಲ್ಲಿದೆ ಇದು ಯಾವ ರೀತಿಯ ಜಕಾತ್ ಪದ್ದತಿ? ಬಕ್ರೀದ್‌ನ ಸಮಯದಲ್ಲೂ ಕುರ್ಬಾನಿಕೊಡುವ ಪರಿಯಿದೆ. ಆದರೆ ಈಗ ಕುರ್ಬಾನಿಯ ಒಂದು ಭಾಗವನ್ನು ಮನೆಯವರು ಇಟ್ಟು, ಇನ್ನೊಂದು ಭಾಗ ಸಂಬಂಧಿಕರಿಗೆ ಕೊಟ್ಟು ಮತ್ತೊಂದು ಭಾಗ ನೆರೆಹೊರೆಯವರಿಗೂ, ಪರಿಚಯಸ್ಥರಿಗೆ ಕೊಡುತ್ತಾರೆ. ಆದರೆ ಕುರಾನಿನ ಪ್ರಕಾರ, ಒಂದು ಭಾಗವನ್ನು ಬಡವರಿಗೆ ಕೊಡುವ ರೀತಿ ಇದೆ. ಆದರೆ ಈಗಿನ ಕುರ್ಬಾನಿ ಇಸ್ಲಾಂ ಪದ್ಧತಿಯ ಪ್ರಕಾರ ಮಾಡದೆ, ತಮಗೆ ಬೇಕಾದ ಹಾಗೆ ಮಾಡುವುದು ಸರಿಯಲ್ಲ ಬ್ಯಾರಿಗಳು ಧಾರ್ಮಿಕ ಆಚರಣೆ ಮತ್ತು ಮೂಢನಂಬಿಕೆಗಳಲ್ಲಿ ಬಲವಾದ ವಿಶ್ವಾಸವನ್ನಿಟ್ಟು, ಪಾಲಿಸುತ್ತಾ ಬಂದಿದ್ದಾರೆ. ಆದರೆ ಇಸ್ಲಾಂ ಧರ್ಮದಲ್ಲಿ ಧಾರ್ಮಿಕ ಆಚರಣೆ ಮತ್ತು ಮೂಢನಂಬಿಕೆಗೆ ಸ್ಥಾನವಿಲ್ಲ. ಇತಿಹಾಸಕಾರರು ಮತ್ತು ಬ್ಯಾರಿ ಬರಹಗಾರರು 'ಬ್ಯಾರಿ' ಎಂಬ ಪದ 'ಬ್ಯಾರ' ಎಂಬ ತುಳುಪದದಿಂದ ಬಂದಿದೆ, ಬ್ಯಾರಿಗಳು ವ್ಯಾಪಾರಸ್ಥರು ಎಂದು ಹೇಳಿದ್ದಾರೆ. ಬಹಳ ಹಿಂದಿನಿಂದ ಕಾಸರಗೋಡು ಪ್ರದೇಶದಿಂದ ದಕ್ಷಿಣ ಕನ್ನಡಕ್ಕೆ ವಲಸೆ ಬಂದು ನೆಲಸಿದವರನ್ನು ಉರ್ದು ಮಾತನಾಡುವ

ದಖ್ಖನಿಗಳು ಕರೆದಿದ್ದು 'ಮಲಬಾರಿ'ಗಳೆಂದು ಈಗಲೂ ಅವರು ಬ್ಯಾರಿಗಳನ್ನು ಕರೆಯುವುದು 'ಮಲಬಾರಿ' ಎಂದೇ. ಈ ಮಲಬಾರಿಯೇ ಬ್ಯಾರಿ ಯಾಕಾಗಬಾರದು? ಸಮುದ್ರದ ಮೂಲಕ ವ್ಯಾಪಾರಕ್ಕೆ ಬಂದ ಅರಬರಿಂದ ಉಂಟಾದ ಸಂತತಿಗೆ ಬ್ಯಾರಿ ಎಂದು ಯಾಕೆ ಕರೆದಿರಬಾರದು? 'ಬ್ಯಾರ' ಮಾಡುವವನೇ ಬ್ಯಾರಿ ಎಂದಾದರೆ ಬ್ಯಾರ ಮಾಡುವ ಕೊಂಕಣಿಗಳು, ಶೆಟ್ಟಿಗಳು ಯಾಕೆ ಬ್ಯಾರಿಗಳಾಗಲಿಲ್ಲ? ಎಂಬ ಪ್ರಶ್ನೆಗಳಿಗೆ ಸರಿಯಾದ ಉತ್ತರ ಸಿಗಲಿಲ್ಲ. ಆದ್ದರಿಂದ ಬ್ಯಾರ ಮಾಡುವವರೇ ಬ್ಯಾರಿಗಳೆಂದು ವ್ಯಾಖ್ಯಾನಿಸುವುದು ತಪ್ಪು ಆಧುನಿಕ ಯುಗದಲ್ಲಿ ಬ್ಯಾರಿಗಳು ವ್ಯಾಪಾರಸ್ಥರು ಮಾತ್ರವಲ್ಲದೆ, ಇತರ ಕ್ಷೇತ್ರದಲ್ಲೂ ತಮ್ಮನ್ನು ತೊಡಗಿಸಿದ್ದಾರೆ ಈಗ ಬ್ಯಾರಿಗಳು ವಿದ್ಯಾವಂತರಾಗುತ್ತಿರುವ ಕಾರಣ ವಿವಿಧ ಕ್ಷೇತ್ರದಲ್ಲಿ ತಮ್ಮನ್ನು ಅಳವಡಿಸಿಕೊಂಡಿದ್ದಾರೆ. ಈಗಲೂ ವ್ಯಾಪಾರ ಮಾಡುವವರೇ ಬ್ಯಾರಿಗಳು ಎನ್ನುವುದು ತಪ್ಪು ಕಲ್ಪನೆ. ಹಿಂದೆ ಬ್ಯಾರಿಗಳು ಅವಿದ್ಯಾವಂತರಾದ ಕಾರಣ, ಸಾಮಾಜಿಕವಾಗಿ ಹಿಂದುಳಿದವರಾಗಿದ್ದರು. ಸರಕಾರಿ, ಅರೆಸರಕಾರಿ, ಮತ್ತು ಖಾಸಗಿ ಕಛೇರಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಅಥವಾ ದುಡಿಯಲು ಹಿಂಜರಿಯುತ್ತಿದ್ದರು. ಈಗ ಬ್ಯಾರಿ ಸಮುದಾಯದ ಹಲವಾರು ಶಿಕ್ಷಣ ಸಂಸ್ಥೆ, ಆಸ್ಪತ್ರೆಗಳು, ಸಂಘ ಸಂಸ್ಥೆಗಳು ತೆರೆದ ಕಾರಣ ವಿದ್ಯಾಭ್ಯಾಸದ ಪ್ರಾಮುಖ್ಯತೆಯನ್ನು ಅರಿತವರಾಗಿದ್ದಾರೆ. ಬ್ಯಾರಿ ಸಮುದಾಯದಲ್ಲಿ ಇತೀಚೆಗೆ ಗಲ್ಫ್ ರಾಷ್ಟ್ರಗಳಲ್ಲಿ ದೊರಕುವ ಉದ್ಯೋಗದ ಆಕರ್ಷಣೆ ಹೆಚ್ಚಾಗಿದೆ. ಗಲ್ಫ್ ರಾಷ್ಟ್ರದ ವಲಸೆಯಿಂದಾಗಿ ಹಲವಾರು ಕುಟುಂಬಗಳ ಆರ್ಥಿಕ ಸುಧಾರಣೆಗಳಾಗಿವೆ ಅದರ ಜೊತೆಗೆ ಸಾಮಜಿಕ ಬದಲಾವಣೆಗಳೂ ಆಗಿವೆ. ಗಲ್ಫ್ ರಾಷ್ಟ್ರಗಳಿಗೆ ಹೋಗುವುದು ಸರ್ವೆ ಸಾಮಾನ್ಯವಾದುದರಿಂದ ಶಿಕ್ಷಣ ಪಡೆದ ಬ್ಯಾರಿ ಯುವಕರ ಸಂಖ್ಯೆ ಕಡಿಮೆಯಾಗಿದೆ. ಸಂಪತ್ತಿನ ಆಸೆಯಿಂದ ಶಾಶ್ವತವಾಗಿರತಕ್ಕಂತಹ ಸಾಂಸಾರಿಕ ಕೌಟುಂಬಿಕ ಜೀವನವನ್ನೇ ಕಡೆಗಣಿಸಿದಂತಾಗಿದೆ. ತಮ್ಮ ಕುಟುಂಬದ ಆಗುಹೋಗುಗಳಲ್ಲಿ ಭಾಗವಹಿಸಲು ಅಸಾಧ್ಯವಾಗಿದೆ. ಮಕ್ಕಳ ಮೇಲೆ ಹಿಡಿತವೂ ತಪ್ಪಿ, ಎಳೆಯರು ದಾರಿ ತಪ್ಪುವಂತಾಗಿದೆ. ಗಲ್ಫ್ ರಾಷ್ಟ್ರದಿಂದ ಊರಿಗೆ ಬಂದಾಗ, ಹಣವನ್ನು ನೀರಿನಂತೆ ಖರ್ಚು ಮಾಡಿ, ಉನ್ನತ ಮಟ್ಟದಲ್ಲಿ ಇರುವವರಂತೆ ಸಮಾಜದಲ್ಲಿ ತೋರಿಸಿಕೊಳ್ಳುತ್ತಾರೆ. ಹಿಂದೆ ಬ್ಯಾರಿಗಳು ನೀತಿಯುತ

ನಡವಳಿಕೆಯಿಂದಾಗಿ ಸಮಾಜದಲ್ಲಿ ಗುರುತಿಸಲ್ಪಟ್ಟವರಾಗಿದ್ದರು. ಆದರೆ ಬದಲಾಗುತ್ತಿರುವ ಬ್ಯಾರಿಗಳ ಜೀವನಶೈಲಿ ನೈತಿಕತೆಯ ಮೇಲೆ ಗಾಢವಾದ ಪರಿಣಾಮವನ್ನು ಬೀರಿದೆ. ಬ್ಯಾರಿ ಸಮುದಾಯದಲ್ಲಿ ಶಿಸ್ತು ಕಾಣೆಯಾಗಿದೆ. ಆದರೆ ಬ್ಯಾರಿಗಳು ಸಮಾಜದಲ್ಲಿ ಇನ್ನೂ ಬದಲಾವಣೆಗೊಳ್ಳಬೇಕು. ಬ್ಯಾರಿ ಮಹಿಳೆಯರು ಸಮಾಜದಲ್ಲಿ ಎಲ್ಲಾ ಸಮುದಾಯದವರೊಡನೆ ಬೆರೆತು ಮುಂದೆ ಬರಬೇಕಾಗಿದೆ. ಪರ್ದಾ ಪದ್ಧತಿಯು ಅವರನ್ನು ಇತರ ಸಮುದಾಯದವರೊಡನೆ ಬೆರೆಯಲು ಅಡ್ಡಿಪಡಿಸಿದೆ. ಬ್ಯಾರಿ ಮಹಿಳೆಯರು ಸ್ವತಂತ್ರವಾಗಿ, ಧೈರ್ಯವಾಗಿ ಬಾಳಲು ಬ್ಯಾರಿ ಪುರುಷರು ಸಹಕರಿಸಿದರೆ ಮಾತ್ರ ಸಾಧ್ಯ. ಬ್ಯಾರಿ ಮಹಿಳೆಯರು ಸಮಾಜದಲ್ಲಿ ಮುಂದುವರಿಯಬೇಕಾದರೆ ಅವರ ಹಿಂದೆ ಪುರುಷರ ಸಹಾಯ, ಸಹಕಾರ, ಧೈರ್ಯಯುತ, ದಿಟ್ಟ ನಿರ್ಧಾರಗಳ ಅಗತ್ಯವಿದೆ.

## ಅಡಿ ಟಿಪ್ಪಣಿ

೧. **ಡಾ ವಹಾಬಿ ದೊಡ್ಡಮನೆ, ೨೦೦೮**
ತುಳುನಾಡಿನ ಮುಸ್ಲಿಮರು, ಗ್ರೀಡ್‌ವರ್ಡ್ಸ್ ಪಬ್ಲಿಕೇಷನ್, ಮಂಗಳೂರು

೨. **ಹಂಝಮಲಾರ್, ೨೦೦೧**
ಬ್ಯಾರಿ ಮುಸ್ಲಿಮರು, ಮಧುರ ಪ್ರಕಾಶನ, ಮಂಗಳೂರು

೩. **ಪ್ರಗತಿ, ೧೯೯೭**
ಬ್ಯಾರೀಸ್ ವೆಲ್ಫೇರ್ ಅಸೋಸಿಯೇಶನ್, ಬೆಂಗಳೂರು

# ಅಧ್ಯಾಯ ಐದು

# ಕೌಟುಂಬಿಕ ಸ್ಥಿತಿಗತಿ

೫.೪ ಕುಟುಂಬ ವ್ಯವಸ್ಥೆ

೫.೫ ಕುಟುಂಬ ವ್ಯವಸ್ಥೆಯಲ್ಲಿ ಶೈಕ್ಷಣಿಕ ಪಾತ್ರ

೫.೬ ಕೌಟುಂಬಿಕ ಬದಲಾವಣೆಗಳು

# ಅಧ್ಯಾಯ ಐದು

# ಕೌಟುಂಬಿಕ ಸ್ಥಿತಿಗತಿ

## ೫.೧. ಕುಟುಂಬ ವ್ಯವಸ್ಥೆ

ಹಿಂದೆ ಬ್ಯಾರಿ ಕುಟುಂಬದಲ್ಲಿ ಮಾತೃಮೂಲ ಪದ್ಧತಿ ಬಳಕೆಯಲ್ಲಿತ್ತು. ಅದು ಸ್ಥಳೀಯ ಸಂಪ್ರದಾಯವಾಗಿದ್ದು, ಬ್ಯಾರಿ ಸಂಸ್ಕೃತಿಯ ಭಾಗವಾಗಿ ಬೆಳೆದು ಬಂದಿತ್ತು. ಮನೆತನದ ಮಹಿಳೆಯರನ್ನು ಬೀಬಿ ಎಂದು ಗೌರವಿಸುತ್ತಿದ್ದುದಲ್ಲದೆ, ಕುಟುಂಬ ಮೂಲವು ಸ್ತ್ರೀ ಆಧಾರವಾಗಿರುತ್ತಿತ್ತು. ಭಾರತದಲ್ಲಿ ೧೯೩೭ರಿಂದ ಶರೀಯತ್ ನಿಯಮಾಧಾರಿತ ಮುಸ್ಲಿಂ ನಿಯಮ ಜಾರಿಗೊಂಡಿತು. ಇದರ ಪ್ರಕಾರ, ಮಾತೃಮೂಲ ಪದ್ಧತಿ ಹೋಗಿ ಪಿತೃಮೂಲ ಪದ್ಧತಿ ಜಾರಿಗೆ ಬಂದಿತು. ಬ್ಯಾರಿ ಕುಟುಂಬ ವ್ಯವಸ್ಥೆಯು ತಂದೆಯ ಆಧಾರದಿಂದ ಮತ್ತು ಯಜಮಾನತೆಯಿಂದ ಪ್ರಾರಂಭವಾಗುತ್ತದೆ. ಆಧುನಿಕ ಕಾಲದಲ್ಲಿ ಗಂಡಸರು ಗಲ್ಫ್‌ರಾಷ್ಟ್ರದ ಕಡೆ ಹೆಚ್ಚು ಒಲವು ತೋರಿಸುವ ಕಾರಣ, ಮನೆಯಲ್ಲಿ ತಂದೆ ಮತ್ತು ಗಂಡುಮಕ್ಕಳು ಇರದ ಕಾರಣ ಕುಟುಂಬದ ಜವಾಬ್ಧಾರಿ ತಾಯಿಯ ಮೇಲೆ ಇರುತ್ತದೆ. ಆದ ಕಾರಣ ಈಗಲೂ ಬ್ಯಾರಿ ಸಮುದಾಯದ ಕುಟುಂಬ ವ್ಯವಸ್ಥೆ ಮಾತೃಮೂಲ ಪದ್ಧತಿಯಿಂದ ಕೂಡಿದೆ ಎಂದರೆ ತಪ್ಪಾಗಲಾರದು.

ಬ್ಯಾರಿ ಕುಟುಂಬದಲ್ಲಿ ಗಂಡುಮಕ್ಕಳಿಗೆ ಹೆಚ್ಚು ಪ್ರಾಮುಖ್ಯತೆ ಮತ್ತು ಸ್ವಾತಂತ್ರ್ಯಕೊಡುತ್ತಾರೆ. ಹೆಣ್ಣುಮಕ್ಕಳಿಗೆ ಕಡಿಮೆ ಪ್ರಾಮುಖ್ಯತೆ ಮತ್ತು ಸ್ವಾತಂತ್ರ್ಯಕೊಡುತ್ತಾರೆ. ಹಿಂದೆ ಹೆಣ್ಣು ಮಕ್ಕಳಿಗೆ ಶಿಕ್ಷಣ ಪಡೆಯುವ ಸ್ವಾತಂತ್ರ್ಯವಿರಲಿಲ್ಲ. ಆದರೆ ಈಗ ಹೆಣ್ಣುಮಕ್ಕಳಿಗೆ ಶಿಕ್ಷಣದ ಪ್ರೋತ್ಸಾಹ ನೀಡುತ್ತಾರೆ. ಈಗಲೂ ಹೆಣ್ಣು ಮಗಳನ್ನು ಒಬ್ಬಳೇ ಹೊರಗೆ ಕಳುಹಿಸುವುದಿಲ್ಲ, ಅವಳ ಜೊತೆ ತಮ್ಮ ಅಥವಾ ಅಣ್ಣನನ್ನು ಕಳುಹಿಸುತ್ತಾರೆ. ಇದು ಏನನ್ನು ತೋರಿಸುತ್ತದೆಯೆಂದರೆ ಇಂದಿನ ಈ ಯುಗದಲ್ಲಿಯೂ ತಂದೆ ತಾಯಿಯರಿಗೆ ತಮ್ಮ

ಮಗಳನ್ನೊಬ್ಬಳನ್ನೇ ಕಳುಹಿಸುವ ಧೈರ್ಯವಿಲ್ಲವೋ ಅಥವಾ ತಮ್ಮ ಮಗಳ ಮೇಲೆ ನಂಬಿಕೆಯಿಲ್ಲವೋ ಎಂದನ್ನಿಸುತ್ತದೆ.

ಬ್ಯಾರಿ ಕುಟುಂಬದಲ್ಲಿ ತಂದೆ ತಾಯಿಯರಿಗೆ ಪ್ರಾಯವಾದರೂ ಮನೆಯಲ್ಲಿ ಅವರ ಸ್ಥಾನಮಾನ ಅದೇ ರೀತಿ ಇರುತ್ತದೆ, ಮತ್ತು ಅವರ ಮಕ್ಕಳು ಪೋಷಕರನ್ನು ಉತ್ತಮ ರೀತಿಯಲ್ಲಿ ತಮ್ಮೊಂದಿಗೆ ಇಟ್ಟುಕೊಂಡು ಸಾಕಿ ಸಲಹುತ್ತಾರೆ. ಬೇರೆ ಸಮುದಾಯದವರ ಹಾಗೆ ಪ್ರಾಯ ಆದ ಕೂಡಲೇ, ಹೊರಗೆ ಹಾಕುವುದು ಅಥವಾ ಆಶ್ರಮಕ್ಕೆ ಸೇರಿಸುವ ಪದ್ಧತಿ ಬ್ಯಾರಿಗಳಲ್ಲಿ ಇಲ್ಲ. ಅವರು ಎಷ್ಟೇ ಕಷ್ಟ ಬಂದರೂ ತಮ್ಮ ಹೆತ್ತವರನ್ನು ಸುಖವಾಗಿ ನೋಡಿಕೊಳ್ಳುತ್ತಾರೆ. ಬ್ಯಾರಿ ಕುಟುಂಬದಲ್ಲಿ ಹಿಂದೆ ಎಲ್ಲರೂ ಅಂದರೆ ಕುಟುಂಬದ ಮಕ್ಕಳೂ, ಅವರ ಮಕ್ಕಳೂ ಒಟ್ಟಿಗೆ ಒಂದೇ ಸೂರಿನಡಿ ಅಥವಾ ಅವಿಭಜಿತ ಕುಟುಂಬದಲ್ಲಿ ವಾಸಿಸುತ್ತಿದ್ದರು. ಆದರೆ ಆಧುನಿಕ ಕಾಲದಲ್ಲಿ ಕುಟುಂಬದ ಸದಸ್ಯರೆಲ್ಲರೂ ತಮ್ಮ ತಮ್ಮ ಸಂಸಾರದೊಡನೆ ಬೇರೆ ಬೇರೆ ಮನೆಯಲ್ಲಿ ವಾಸವಾಗಿದ್ದಾರೆ, ಆದರೂ ತಮ್ಮ ಕುಟುಂಬದ ಮನೆಗೆ ಬಂದು ಹೋಗುವ ಪದ್ಧತಿ, ಒಳ್ಳೆ ಕಾರ್ಯಗಳ ಸಮಯ ಮತ್ತು ಹಬ್ಬ ಹರಿದಿನಗಳಂದು ಎಲ್ಲರೂ ಒಟ್ಟಾಗಿ ಸೇರಿಕೊಂಡು ಒಬ್ಬರನ್ನೊಬ್ಬರು ತಬ್ಬಿಕೊಂಡು ಸಂತೋಷದಿಂದಿರುವುದೂ ರೂಢಿಯಲ್ಲಿದೆ. ಕುಟುಂಬದ ಯಾವುದೇ ಸದಸ್ಯರು ತೊಂದರೆಯಲ್ಲಿದ್ದರೂ ಒಬ್ಬರಿಗೊಬ್ಬರು ಸಹಾಯ ಮಾಡುವ ಮನೋಭಾವವೂ ಬ್ಯಾರಿ ಕುಟುಂಬದಲ್ಲಿ ಈಗಲೂ ಜಾರಿಯಲ್ಲಿದೆ.

ಬ್ಯಾರಿ ಸಮುದಾಯದಲ್ಲಿ ಮದುವೆ, ಆಸ್ಪತ್ರೆ ಇತರ ಸಮಾರಂಭಕ್ಕೆ ಹೋಗಬೇಕಾದರೆ ಕುಟುಂಬ ಸಮೇತರಾಗಿ ಹೋಗುತ್ತಾರೆ ಯಾಕೆಂದರೆ ಈ ಕ್ರಮವು ಕುಟುಂಬದ ಸದಸ್ಯರೆಲ್ಲರಿಗೂ ಒಳ್ಳೆಯ ಕಾರ್ಯ ಮತ್ತು ದುಃಖದ ಸಮಯದಲ್ಲಿ ಒಟ್ಟಾಗಿ ನಡೆಯಬೇಕೆಂಬುದನ್ನು ಕಲಿಸಿ ಕೊಡುತ್ತದೆ. ಬ್ಯಾರಿ ಸಮುದಾಯದಲ್ಲಿ ಕುಟುಂಬದ ಎಲ್ಲಾ ಸದಸ್ಯರು ತಂದೆಗೆ ತುಂಬಾ ಗೌರವವನ್ನು ಕೊಡುತ್ತಾರೆ. ಹೆಣ್ಣುಮಕ್ಕಳು ತನ್ನ ಅಣ್ಣ ಮತ್ತು ತಮ್ಮನಿಗೂ ತುಂಬಾ ಗೌರವವನ್ನು ತೋರಿಸುತ್ತಾರೆ. ಈ ಪದ್ಧತಿ ಹಿಂದೆಯೂ, ಈಗಲೂ ಇದೇ ರೀತಿ ಇದೆ. ಇದರಿಂದ ಕುಟುಂಬದಲ್ಲಿ ಗಂಡಸರಿಗೆ ಹೆಚ್ಚಿನ ಸ್ಥಾನವಿದೆ ಎಂದು ತಿಳಿಯುತ್ತದೆ.

ಬ್ಯಾರಿ ವಿವಾಹವು ಸ್ತ್ರೀಯರಿಗೆ ಆರ್ಥಿಕ ಭದ್ರತೆಯನ್ನು ನೀಡುತ್ತದೆ. ಪುರುಷನು ತನ್ನ ಪತ್ನಿಗೆ ವಿವಾಹ ಧನವಾಗಿ ಏನೇ ನೀಡಿದರೂ ಅದು ಆಕೆಯದ್ದಾಗಿದೆ. ಬ್ಯಾರಿ ಕುಟುಂಬದಲ್ಲಿ ಪುರುಷರು ಸ್ತ್ರೀಯರ ಮೇಲೆ ಮೇಲ್ವಿಚಾರಕ ಆಗಿರುತ್ತಾರೆ. ಇದು ಅಲ್ಲಾಹನು ಕೆಲವರಿಗೆ ಕೆಲವರ ಮೇಲೆ ಶ್ರೇಷ್ಠತೆ ಪ್ರಧಾನ ಮಾಡಿದುದರಿಂದ ಮತ್ತು ಪುರುಷರು ತಮ್ಮ ಸಂಪತ್ತನ್ನು ಖರ್ಚು ಮಾಡುವುದರಿಂದ ದುಡಿಮೆ ಮತ್ತು ಕರ್ತವ್ಯಗಳಲ್ಲಿರುವ ಈ ವ್ಯತ್ಯಾಸಕ್ಕೆ ಸಂಬಂಧಿಸಿದ ಕುಟುಂಬ ವ್ಯವಸ್ಥೆಯ ಬಾಹ್ಯ ಅಧಿಕಾರವನ್ನು ಪ್ರೇರಕ ನಾಯಕತ್ವವೆಂದು ಹೇಳಲಾಗಿದೆ ಬ್ಯಾರಿ ಕುಟುಂಬದಲ್ಲಿ ಪತ್ನಿಗೆ ಕೆಲವು ಹಕ್ಕುಗಳನ್ನು ನೀಡಿದೆ. ಪತ್ನಿಯೊಡನೆ ನ್ಯಾಯದಿಂದ ಮತ್ತು ಕರುಣೆಯಿಂದ ವ್ಯವಹರಿಸಬೇಕಾದುದು ಪತಿಯ ಕರ್ತವ್ಯವಾಗಿದೆ. ಪತಿಯ ಆಸ್ತಿಯಲ್ಲಿ ಪತ್ನಿಗೂ ಹಕ್ಕುಗಳಿವೆ.

ಬ್ಯಾರಿ ಕುಟುಂಬವು ಮಕ್ಕಳ ಪೋಷಣೆಯ ಬಗ್ಗೆ ತೀವ್ರ ಗಮನ ಹರಿಸಿದೆ. ಮಕ್ಕಳೊಂದಿಗಿನ ಪ್ರೀತಿ ಬ್ಯಾರಿ ಸಮುದಾಯದ ವೈಶಿಷ್ಟ್ಯವೆಂದು ಹೇಳಬಹುದು. ಹೆತ್ತವರ ಮತ್ತು ಮಕ್ಕಳ ಸಂಬಂಧವು ಗೌರವಾರ್ಹವಾಗಿದೆ. ಹೆತ್ತವರು ಮತ್ತು ಮಕ್ಕಳು ಪರಸ್ಪರ ಕರ್ತವ್ಯ ಬದ್ಧತೆ ಹಾಗೂ ಅನ್ಯೋನ್ಯ ಕಟ್ಟುಪಾಡುಗಳಿಂದ ಬೆಸೆಯಲ್ಪಟ್ಟಿದ್ದಾರೆ.

ಬ್ಯಾರಿಗಳದ್ದು ಸರಳವಾದ ಬದುಕು ಪ್ರತಿಯೊಂದು ಕೆಲಸಮಾಡುವಾಗ, ಆಹಾರ ತಿನ್ನುವಾಗ, ನಡೆಯುವಾಗ ಹೀಗೆ ಪ್ರತೀ ಸಂದರ್ಭದಲ್ಲೂ ಕೂಡಾ ಬಿಸ್ಮಿಯನ್ನು ಉಚ್ಚರಿಸುತ್ತಾರೆ ಉದಾ: ಹಸುವಿನ ಮೊದಲ ಹಾಲು ಉಪಯೋಗಿಸುವಾಗ ಫಾತಿಹಾ ಓದಿ ದುಆ ಮಾಡಿದ ನಂತರ ಕುಡಿಯಲಾಗುತ್ತದೆ. ಪರಸ್ಪರ ಕಂಡಾಗ 'ಅಸ್ಸಲಾ ಅಲೈಕುಂ' ಎನ್ನುವುದು, ಹಸ್ತಲಾಘವನ ಮಾಡುವುದು, ಪ್ರತೀ ಸಂದರ್ಭದಲ್ಲಿ 'ಇನ್‌ಶಾ ಅಲಾಹ್' (ದೇವರು ಅನುಗ್ರಹಿಸಲಿ) ಎಂದು ಹೇಳುವುದು ಸಾಮಾನ್ಯವಾಗಿದೆ. ಬ್ಯಾರಿಗಳು ಬೆಳಿಗ್ಗೆ ನಮಾಜ್ ಬಾಂಗ್ ಮೊಳಗಿದ ಕೂಡಲೇ ಎದ್ದು, ಸುಬಹಿ ನಮಾಜ್ ಮಾಡಿ ಕುರಾನ್ ಪಾರಾಯಣ ಮಾಡುತ್ತಾರೆ. ಬ್ಯಾರಿ ಸ್ತ್ರೀಯರಂತೂ ಬೆಳಿಗ್ಗೆ ಕುರಾನ್ ಪಾರಾಯಣ ಮಾಡಿಯೇ ಮುಂದಿನ ಕೆಲಸಕ್ಕೆ ಅಣಿಯಾಗುತ್ತಾರೆ. ದಿನದಲ್ಲಿ ಐದು ಬಾರಿ ನಮಾಜ್ ಮಾಡುವುದು ಬ್ಯಾರಿ ಮುಸ್ಲಿಮರ ಪರಮ

ಕರ್ತವ್ಯವಾಗಿದೆ. ಕುಟುಂಬಕ್ಕೆ ಹಲವು ವ್ಯಾಖ್ಯಾನ ಮತ್ತು ವಿವರಣೆಗಳಿವೆ. ಕುಟುಂಬವೆಂದರೆ ಲೌಕಿಕ ಮತ್ತು ರಕ್ತ ಸಂಬಂಧದಿಂದ ಪರಸ್ಪರ ಬೆಸೆದುಕೊಂಡಿರುವ ಸಂಬಂಧಿಕರ ಒಂದು ಸಾಮೂಹಿಕ ಸಂಸ್ಥೆ, ರಕ್ತ ಸಂಬಂಧ ಮತ್ತು ವೈವಾಹಿಕ ಕ್ರಮಗಳೇ ಬ್ಯಾರಿ ಕುಟುಂಬದ ಬುನಾದಿಗಳಾಗಿವೆ. ಬ್ಯಾರಿ ಕುಟುಂಬದ ಬುನಾದಿಯು ನೈತಿಕ ಸಂತೃಪ್ತಿ, ನಿಸ್ವಾರ್ಥ ಅನ್ಯೋನ್ಯತೆಯನ್ನು ಬೆಳೆಸುವ ರೀತಿಯಲ್ಲಿ ಸುಭದ್ರ ಮತ್ತು ನೈಸರ್ಗಿಕವಾಗಿರುತ್ತದೆ. ರಕ್ತ ಸಂಬಂಧಕ್ಕಿಂತ ಮಿಗಿಲಾದ ನೈಸರ್ಗಿಕ ಸಂಬಂಧವಿಲ್ಲ.

ಓರ್ವ ಬ್ಯಾರಿ ಮೃತಪಟ್ಟರೆ ಆತನ ಅಥವಾ ಆಕೆಯ ಎಲ್ಲಾ ಬಂಧು ಬಳಗ, ಕುಟುಂಬಸ್ಥರು, ಊರವರೂ ಹೀಗೆ ಎಲ್ಲರೂ ಹೋಗಿ ಮೃತದೇಹವನ್ನು ನೋಡುವುದು ಸಾಮಾನ್ಯ ಇದಕ್ಕೆ 'ಕಣ್ಣೇಕ್'ಎಂದು ಕರೆಯಲಾಗುತ್ತದೆ. ಮೃತಪಟ್ಟ ಸುದ್ದಿ ಸಿಕ್ಕಿದ ಕೂಡಲೇ ಇಸ್ಲಾಂ ಧರ್ಮ ಕಲಿಸಿಕೊಟ್ಟ 'ಇನ್ನಾಲಿಲ್ಲಾಹಿ ವ ಇನ್ನಾ ಇಲೈಹಿ ರಾಜೀವೂನ್' ಎಂಬ ವಾಕ್ಯ ಉಚ್ಚರಿಸಲಾಗುತ್ತದೆ. ಮೃತ ದೇಹಕ್ಕೆ ಬಿಳಿ ಬಟ್ಟೆ ಸುತ್ತಲಾಗುತ್ತದೆ ಮತ್ತು ಮೃತ ದೇಹದ ಸುತ್ತ ಮುತ್ತಲೂ ಕುರಾನ್ ಪಠಿಸಲಾಗುತ್ತದೆ. ಮೃತ ದೇಹವನ್ನು ಸ್ನಾನ ಮಾಡಿಸಿ ಕಿಬ್ಲಾಕ್ಕೆ ಮುಖ ಹಾಕಿ ಮಲಗಿಸುತ್ತಾರೆ. ಮೃತದೇಹವನ್ನು ಮನೆಯಿಂದ ದಫನ ಭೂಮಿಗೆ ಕೊಂಡೊಯ್ಯುವ ಮುನ್ನ ಮೌಲವಿ ವಿಶೇಷ ದುಆ ಮಾಡುತ್ತಾರೆ. ಹಾಗೇ ಕೊಂಡು ಹೋಗುವಾಗ ಲಾ ಇಲಾಹ ಇಲ್ಲಲ್ಲಾಹು ಎಂದು ಹೇಳಲಾಗುತ್ತದೆ. ಮೃತ ದೇಹದ ಮಂಚಕ್ಕೆ ಮನೆಯವರು ಮತ್ತು ಆಪ್ತರು ಭುಜಕೊಡುವುದು ವಾಡಿಕೆ.

ಈ ರೀತಿ ಬ್ಯಾರಿ ಕುಟುಂಬ ವ್ಯವಸ್ಥೆಯಲ್ಲಿಯೂ ಸ್ವಲ್ಪ ಬದಲಾವಣೆಯನ್ನು ಕಾಣಬಹುದು. ಸ್ತ್ರೀಯರಿಗೆ ಸ್ವಾತಂತ್ರ್ಯ, ಶಿಕ್ಷಣ ಮತ್ತು ಹೆಚ್ಚು ಹಕ್ಕುಗಳನ್ನು ಈಗ ಕೊಡಲಾಗುತ್ತಿದೆ. ಇನ್ನೂ ಕೆಲವು ಬದಲಾವಣೆ ಎಂದರೆ ಸ್ತ್ರೀಯರು ಸಮಾಜದಲ್ಲಿ ತಮ್ಮನ್ನು ತಾವು ಗುರುತಿಸುವ ಹಾಗೆ ಮತ್ತು ಸ್ವತಂತ್ರವಾಗಿ ಎಲ್ಲಾ ಕಾರ್ಯಕ್ರಮಗಳಲ್ಲೂ ಭಾಗಿಯಾಗುವ ಹಕ್ಕುಗಳು ಸಿಕ್ಕಿದರೆ ಕುಟುಂಬ ವ್ಯವಸ್ಥೆಯಲ್ಲಿ ಸಂಪೂರ್ಣ ಬದಲಾವಣೆಯನ್ನು ಕಂಡಂತಾಗುವುದು.

## ೫.೨ ಕುಟುಂಬ ವ್ಯವಸ್ಥೆಯಲ್ಲಿ ಶೈಕ್ಷಣಿಕ ಪಾತ್ರ

ಬ್ಯಾರಿ ಕುಟುಂಬ ವ್ಯವಸ್ಥೆಯಲ್ಲಿ ಇರುವ ಪ್ರಮುಖ ಸಮಸ್ಯೆ ಎಂದರೆ ಶಿಕ್ಷಣದ ಕುರಿತು ಬೆಳೆದು ಬಂದಿರುವ ಧೋರಣೆ. ಶಿಕ್ಷಣ ಕ್ಷೇತ್ರದಲ್ಲಿ ಬ್ಯಾರಿ ಕುಟುಂಬ ಬಹಳಷ್ಟು ಹಿಂದುಳಿದಿದೆ. ಹಿಂದೆ ಬ್ಯಾರಿ ಕುಟುಂಬ ವ್ಯವಸ್ಥೆಯಲ್ಲಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸದೆ ಬರೇ ಮದರಸಕ್ಕೆ ಕಳುಹಿಸಿ ಧಾರ್ಮಿಕ ಶಿಕ್ಷಣವನ್ನು ಮಾತ್ರ ಒದಗಿಸಿ ಲೌಕಿಕ ಶಿಕ್ಷಣದಿಂದ ವಂಚಿತರನ್ನಾಗಿ ಮಾಡುತ್ತಿದ್ದರು. ಆದರೆ ಇತ್ತೀಚೆಗಿನ ವರ್ಷಗಳಲ್ಲಿ ಈ ನಿಲುವಿನಲ್ಲಿ ಮಹತ್ತರ ಬದಲಾವಣೆಯಾಗಿದೆ.

### ಹೆಣ್ಣು ಮಕ್ಕಳ ಶಿಕ್ಷಣ

ತಾಯಿಯಾದವಳು ಶಿಕ್ಷಣ ಪಡೆದರೆ ಮಕ್ಕಳು ಶಿಕ್ಷಣ ಪಡೆದಂತೆ, ಬ್ಯಾರಿ ಕುಟುಂಬದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಸ್ಥಿತಿಗಳು ಉತ್ತಮಗೊಳ್ಳಬೇಕಾದರೆ ಮನೆಯಲ್ಲಿ ಓದಲು ಮಕ್ಕಳಿಗೆ ಮಾರ್ಗದರ್ಶನ ನೀಡುವಂತಹ ತಾಯಂದಿರು ಶಿಕ್ಷಣ ಪಡೆದವರಾಗಿರಬೇಕು. ಆದರೆ ಬ್ಯಾರಿ ಕುಟುಂಬದಲ್ಲಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ತೀವ್ರ ನಿರಾಸಕ್ತಿ ಬೆಳೆದಿದೆ. ಸಂಪ್ರದಾಯಸ್ಥ ಕುಟುಂಬಗಳಲ್ಲಿ ಏಳನೆಯ ತರಗತಿಗಿಂತ ಮುಂದೆ ವಿದ್ಯಾಭ್ಯಾಸ ಮಾಡುವುದೇ 'ಪಾಪ' ಎಂಬ ಭಾವನೆಯಿದೆ, ಇತ್ತೀಚೆಗೆ ಈ ನಿಲುವಿನಲ್ಲಿ ಬದಲಾವಣೆ ಕಂಡುಬಂದರೂ ಸಮೀಕ್ಷೆಯಿಂದ ತಿಳಿದು ಬಂದ ಪ್ರಕಾರ ಹಳ್ಳಿಯ ಕುಟುಂಬದಲ್ಲಿ ಏಳನೆಯ ತರಗತಿಗಿಂತ ಮೇಲೆ ಬ್ಯಾರಿ ಹೆಣ್ಣು ಮಕ್ಕಳು ವಿದ್ಯಾಬ್ಯಾಸ ಮುಂದುವರಿಸುವುದು ಬಹಳ ಕಡಿಮೆಯಾಗಿರುತ್ತದೆ. ಆದರೆ ಪಟ್ಟಣಗಳಲ್ಲಿ ಇತ್ತೀಚಿನ ದಿನಗಳಲ್ಲಿ ಬ್ಯಾರಿ ಕುಟುಂಬದವರು ತಮ್ಮ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಡುತ್ತಿದ್ದಾರೆ. ಬ್ಯಾರಿ ಸಂಪ್ರದಾಯದ ಪ್ರಕಾರ ಬ್ಯಾರಿ ಹೆಣ್ಣು ಮಕ್ಕಳು ಘೋಷ ಪದ್ಧತಿ ಬಿಡುವಂತಿಲ್ಲ ಮತ್ತು ಸಂಯುಕ್ತ ಶಾಲಾ ಕಾಲೇಜುಗಳಿಗೆ ಕಳುಹಿಸಲು ಹಿಂಜರಿಕೆಯಿದೆ. ಬ್ಯಾರಿ ಕುಟುಂಬದಲ್ಲಿ ಶಿಕ್ಷಣದ ಬಗ್ಗೆ ಇರುವ ಅಸಡ್ಡೆಯಿಂದಾಗಿ ಹೆಚ್ಚು ಅಂಕಗಳಿಸಿದರೂ, ಬಡತನದಿಂದಾಗಿ, ದುಬಾರಿ ಫೀಸು ತೆರಲು ಸಾಧ್ಯವುಳ್ಳವರು ತೀರಾ ಕಡಿಮೆ ಪ್ರಮಾಣದಲ್ಲಿದ್ದು, ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ತುಂಬಾ ತೊಂದರೆಯುಂಟಾಗಿದೆ.

## ಗಂಡು ಮಕ್ಕಳ ಶಿಕ್ಷಣ

ಬ್ಯಾರಿ ಕುಟುಂಬ ವ್ಯವಸ್ಥೆಯಲ್ಲಿ ಗಂಡು ಮಕ್ಕಳಿಗೆ ಹೆಚ್ಚಿನ ಸ್ಥಾನ ಮತ್ತು ಸ್ವಾತಂತ್ರ್ಯವು ಇದೆ. ಗಂಡು ಮಕ್ಕಳ ಶಿಕ್ಷಣಕ್ಕೆ ತುಂಬಾ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಆದರೆ ಬ್ಯಾರಿ ಗಂಡು ಮಕ್ಕಳಿಗೆ ವಿದ್ಯಾಭ್ಯಾಸದಲ್ಲಿ ಸ್ವಲ್ಪವೂ ಕಾಳಜಿ ಇಲ್ಲ. ತಾನು ವಿದ್ಯಾವಂತನಾಗಬೇಕೆಂಬ ಹಂಬಲವಿಲ್ಲ ಬ್ಯಾರಿ ಕುಟುಂಬದಲ್ಲಿ ಮಕ್ಕಳು ತಮ್ಮ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಿ, ಗಲ್ಫ್ ರಾಷ್ಟ್ರಕ್ಕೆ ಹೋಗಿ ನೆಲೆಸುತ್ತಾರೆ. ಗಲ್ಫ್ ರಾಷ್ಟ್ರದಲ್ಲಿ ದುಡಿದು ಬೇಕಾದಷ್ಟು ಹಣ ಸಂಪಾದನೆ ಮಾಡಿ, ವಿವಾಹದ ಸಮಯ ಹೆಣ್ಣು ನೋಡಲು ಹೋದಾಗ, ಹುಡುಗಿ ಅವನಿಗಿಂತ ಜಾಸ್ತಿ ವಿದ್ಯಾವಂತಳಾದರೂ, ಬೇರೆ ದಾರಿಕಾಣದೆ ಅವಳನ್ನು ಅವನಿಗೆ ಕೊಟ್ಟು ಮದುವೆ ಮಾಡುತ್ತಾರೆ. ಏಕೆಂದರೆ ಅವನು ಬೇಡ ಎಂದು ತಿರಸ್ಕರಿಸಿದರೆ ಬ್ಯಾರಿ ಕುಟುಂಬದಲ್ಲಿ ವಿದ್ಯಾವಂತನಾದ ಗಂಡು ಹುಡುಕುವುದೇ ತುಂಬಾ ಕಷ್ಟಕರವಾದ ಕೆಲಸ, ಕೊನೆಗೆ ಅವನಲ್ಲಿ ಸಂಪತ್ತಾದರೂ ಇದೆಯಲ್ಲಾ ಎಂದು ಮದುವೆ ಮಾಡಿ ಕೊಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಗಂಡು ಮಕ್ಕಳು ಶಿಕ್ಷಣ ಪಡೆದರೂ, ಬ್ಯಾರಿ ಕುಟುಂಬದಲ್ಲಿ ವಿದ್ಯಾವಂತನಾದ ಗಂಡು ಮಕ್ಕಳ ಕೊರತೆಯಿದೆ. ಈ ಕೊರತೆಯನ್ನು ತುಂಬಲು ಪ್ರತಿ ಮನೆಗಳಿಗೂ ತೆರಳಿ ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳುಹಿಸುವಂತೆ ಪ್ರೇರೇಪಿಸಬೇಕಾಗಬಹುದು.

## ಲೌಕಿಕ ಮತ್ತು ಧಾರ್ಮಿಕ ಶಿಕ್ಷಣ

ಬ್ಯಾರಿ ಕುಟುಂಬ ಶಿಕ್ಷಣದಲ್ಲಿ ಹಿಂದೆ ಬೀಳಲು ಲೌಕಿಕ ಮತ್ತು ಧಾರ್ಮಿಕ ಶಿಕ್ಷಣ ಒಂದೇ ಕಡೆ ಸಿಗದೆ ಇರುವುದೂ ಒಂದು ಕಾರಣವಾಗಿದೆ. ಬ್ಯಾರಿಗಳಿಗೆ ಧಾರ್ಮಿಕ ಶಿಕ್ಷಣವು ಮದರಸದಲ್ಲಿಯೂ, ಲೌಕಿಕ ಶಿಕ್ಷಣವು ಶಾಲೆಗಳಲ್ಲಿಯೂ ದೊರೆಯುವುದರಿಂದ ಏಕಕಾಲದಲ್ಲಿ ಎರಡೂ ಶಿಕ್ಷಣವನ್ನು ಕಲಿಯುವ ಮಕ್ಕಳ ಮೇಲೆ ಭಿನ್ನವಾದ ಪರಿಣಾಮವನ್ನು ಬೀರುತ್ತದೆ. ಬ್ಯಾರಿ ವಿದ್ಯಾರ್ಥಿಗಳು ಬೆಳಗಿನಿಂದ ರಾತ್ರಿಯವರೆಗೂ ಕಲಿಯುವುದು ಒಂದು ಉದ್ಯೋಗದಂತೆ ಮಾಡಿಕೊಳ್ಳಬೇಕಾಗಿದೆ. ವಿದ್ಯಾರ್ಥಿಯು ಬೆಳಗ್ಗೆ ಎದ್ದವನು ಪ್ರಾರ್ಥನೆ ಮತ್ತು ಇತರ ನಿತ್ಯ ವಿಧಿಗಳನ್ನು ಪೂರೈಸಿದ ನಂತರ ಬೆಳಿಗ್ಗೆ ೬.೦೦ರಿಂದ ೮.೩೦ರವರೆಗೆ ಮದರಸಕ್ಕೆ

ಹೋಗಬೇಕಾಗುತ್ತದೆ. ಅಲ್ಲಿಂದ ಬಂದವನೇ ಬೆಳಗಿನ ಉಪಹಾರ ಮುಗಿಸಿ ಶಾಲೆಗೆ ಹೊರಟು, ೯.೩೦ರಿಂದ ೪.೩೦ರವರೆಗೆ ಶಾಲೆಯಲ್ಲಿ ಇರಬೇಕಾಗುತ್ತದೆ. ಶಾಲೆಯಿಂದ ಬಂದು ಸಂಜೆಯ ಉಪಾಹಾರವನ್ನು ಪೂರೈಸಿ ಪ್ರಾರ್ಥನೆ ಮುಗಿಸುವಷ್ಟರಲ್ಲಿ ಮಗರಿಬ್ ನಮಾಜ್‌ಗೆ ಸಮಯವಾಗುತ್ತದೆ. ತದನಂತರ ೭.೦೦ರಿಂದ ೮.೩೦ರವರೆಗೆ ಮದರಸಕ್ಕೆ ಹೋಗಿ ನಂತರ ಮಸೀದಿಯಲ್ಲಿ ಇಶಾ ನಮಾಜ್ ಮಾಡಿ, ಮನೆಗೆ ಬಂದು ರಾತ್ರಿಯ ಊಟ ಮುಗಿಸುವ ಹೊತ್ತಿಗೆ ರಾತ್ರಿ ಮಲಗುವ ಹೊತ್ತಾಗಿರುತ್ತದೆ. ಹೀಗೆ ದಿನಚರಿಯು ಯಾಂತ್ರಿಕವಾಗಿ ನಡೆದು, ಮಕ್ಕಳ ಶಾರೀರಿಕ, ಮಾನಸಿಕ ಮತ್ತು ಬೌದ್ಧಿಕತೆಯ ಮೇಲೆ ವಿಪರೀತ ಹೊರೆ ಬೀಳುತ್ತದೆ. ಶಾಲೆಗೆ ರಜೆ ಇದ್ದ ದಿನಗಳಲ್ಲಿಯೂ ಮದರಸಕ್ಕೆ ಹೋಗಬೇಕಾಗಿರುವುದರಿಂದ ಅವರು ವರ್ಷವಿಡೀ ಶಿಕ್ಷಣದಲ್ಲೇ ನಿರತರಾಗಿ ಬಿಡುವು ಎಂಬುದಿರುವುದಿಲ್ಲ. ಇದರಿಂದ ಅವರಿಗೆ ಇತರ ಮನೊರಂಜನೆ, ಆಟೋಟಗಳಿಗೆ ಸಮಯ ಸಿಗದೆ, ಎಲ್ಲಾ ಕ್ಷೇತ್ರಗಳಲ್ಲೂ ಅವರು ಹಿಂದುಳಿಯುವರಲ್ಲದೆ, ಸಮಾಜದಿಂದ ಪ್ರತ್ಯೇಕಿಸಲ್ಪಟ್ಟವರಾಗಿರುತ್ತಾರೆ. ಈ ಒತ್ತಡದಿಂದಾಗಿ ಅವರಿಗೆ ಶಿಕ್ಷಣವು ಒಂದು ಹೊರೆಯಂತೆ ಭಾಸವಾಗಿ, ಶಿಕ್ಷಣದ ಬಗೆಗೆ ನಿರಾಸಕ್ತಿ ಮೂಡಿ, ಶಿಕ್ಷಣವನ್ನು ಮೊಟಕುಗೊಳಿಸುವ ನಿರ್ಧಾರಕ್ಕೆ ಬರುತ್ತಾರೆ.

ಬ್ಯಾರಿ ಕುಟುಂಬಕ್ಕೆ ಸರಿಯಾಗಿ ವಿದ್ಯೆ ಸಿಗದಿರಲು ಕಾರಣ ಅವರ ಬಡತನ ಅಥವಾ ಆರ್ಥಿಕ ಹಿಂದುಳಿದಿರುವಿಕೆ. ಅವರ ಬಡತನಕ್ಕೆ ಕಾರಣ ಅವರು ಶೈಕ್ಷಣಿಕವಾಗಿ ಹಿಂದುಳಿದಿರುವುದು. ಇದೊಂದು ಪರಸ್ಪರ ಸಂಬಂಧವಿರುವ ಸಮಸ್ಯೆ. ಕಳೆದ ಹತ್ತು ವರ್ಷದಿಂದ ಬ್ಯಾರಿಗಳು ಲೌಕಿಕ ಶಿಕ್ಷಣ ರಂಗದತ್ತ ಆಸಕ್ತಿ ವಹಿಸುತ್ತಿರುವುದು ಕಂಡು ಬರುತ್ತದೆ. ಆದರೆ ನಿರೀಕ್ಷಿತ ಸುಧಾರಣೆಯಾಗಿಲ್ಲ. ಶಿಕ್ಷಣದ ಬಗ್ಗೆ ಇರುವ ಭಯಾವೃತ ಮನೋಭಾವವೇ ಬ್ಯಾರಿ ಕುಟುಂಬವನ್ನು ಶಿಕ್ಷಣದಿಂದ ಹಿಂದುಳಿಯಲು ಮೂಲ ಕಾರಣವಾಗಿದೆ.

ಕುಟುಂಬ ವ್ಯವಸ್ಥೆಯಲ್ಲಿ ಶಿಕ್ಷಣವನ್ನು ಹೆಚ್ಚುವರಿಸಲು ಪ್ರತಿ ಕುಟುಂಬದ ಸದಸ್ಯರೂ ಗಂಡು ಹೆಣ್ಣುಗಳಿಗೆ ಸಾಧ್ಯವಾದಷ್ಟು ಉನ್ನತ ಶಿಕ್ಷಣವನ್ನು ನೀಡಬೇಕು. ಚಿಕ್ಕವರಿರುವಾಗಲೇ ಕುಟುಂಬದ ವಾತಾವರಣವು ಶಿಕ್ಷಣಕ್ಕೆ ಪ್ರೋತ್ಸಾಹ ನೀಡುವಂತಿರಬೇಕು. ಆಗ ಕುಟುಂಬದ ಪ್ರತಿಯೊಬ್ಬರೂ ಶಿಕ್ಷಣದ ಮಹತ್ವ ಅರಿಯುತ್ತಾರೆ, ಶಿಕ್ಷಣವಿಲ್ಲದಿದ್ದರೆ ಉದ್ಯೋಗವಿಲ್ಲ ಎಂಬ

ಯೋಚನೆ ಅವರಲ್ಲಿ ಹುಟ್ಟಿಕೊಳ್ಳಬೇಕು. ಆಧುನಿಕ ಯುಗದಲ್ಲಿ ಪಟ್ಟಣದ ಬ್ಯಾರಿ ಕುಟುಂಬದಲ್ಲಿ ಶೈಕ್ಷಣಿಕ ಪಾತ್ರದ ಬಗ್ಗೆ ಅರಿವು ಮೂಡಿದೆ. ಆದರೆ ಹಳ್ಳಿಗಳಲ್ಲಿ ಈ ಅರಿವು ಮೂಡಿಸಬೇಕಾಗಿದೆ. ಏಕೆಂದರೆ ಶಿಕ್ಷಣ ಇಲ್ಲದ ಕುಟುಂಬದಲ್ಲಿ ಶಿಸ್ತು ಇರುವುದಿಲ್ಲ. ಇತರರೊಡನೆ ಯಾವ ರೀತಿ ಸಂಭಾಷಣೆ ಮಾಡಬೇಕು, ಬೆರೆಯಬೇಕು. ಸಮಾಜದಲ್ಲಿ ತಮಗೆ ಏನು ಬೆಲೆ ಇದೆ, ಎಂಬುದು ತಿಳಿದಿರುವುದಿಲ್ಲ. ಬ್ಯಾರಿ ಕುಟುಂಬದ ಹಿಂದುಳಿಯುವಿಕೆಗೆ ಶಿಕ್ಷಣದ ಪಾತ್ರವೇ ಕಾರಣವಾಗಿದೆ.

## ೫.೩ ಕೌಟುಂಬಿಕ ಬದಲಾವಣೆಗಳು

ಕಾಲ ಬದಲಾದಂತೆ ಬ್ಯಾರಿ ಕೌಟುಂಬಿಕ ವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳಾಗಿವೆ. ಬ್ಯಾರಿ ಕುಟುಂಬ ಪಿತೃ ಮೂಲ ಪದ್ಧತಿಯಿಂದ ಕೂಡಿದೆ. ಬ್ಯಾರಿ ಕುಟುಂಬ ವ್ಯವಸ್ಥೆಯು ತಂದೆ ಆಧಾರದಿಂದ ಮತ್ತು ಯಜಮಾನತೆಯಿಂದ ಪ್ರಾರಂಭವಾಗುತ್ತದೆ. ಆದರೆ ಈಗ ಮಾತೃ ಮೂಲ ಪದ್ಧತಿಯಿಂದ ಕೂಡಿದೆ. ಯಾಕೆಂದರೆ ಗಂಡಸರು ಗಲ್ಫ್ ರಾಷ್ಟ್ರಕ್ಕೆ ಉದ್ಯೋಗ ನಿಮಿತ್ತ ಹೋಗುವ ಕಾರಣ ತಾಯಿಯು ಮನೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಾಳೆ. ಯಜಮಾನನಂತೆ ಕುಟುಂಬದ ಸದಸ್ಯರೆಲ್ಲರನ್ನು ನೋಡುವುದೂ, ಮಕ್ಕಳ ಪಾಲನೆ ಪೋಷಣೆ, ಕುಟುಂಬಕ್ಕೆ ಸಂಬಂಧ ಪಟ್ಟ ವ್ಯವಹಾರಗಳನ್ನು ನೋಡುವ, ಈ ರೀತಿ ಎಲ್ಲಾ ಕುಟುಂಬದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾ, ಯಜಮಾನನಂತೆ ಕುಟುಂಬದ ಕಾಳಜಿಯನ್ನು ವಹಿಸುತ್ತಾಳೆ. ಈ ಕಾರಣದಿಂದ ಮನೆಯ ಒಳಗಡೆ ಮನೆಯ ಕೆಲಸಕ್ಕೆ ಸೀಮಿತವಾದ ಬ್ಯಾರಿ ಹೆಂಗಸರು ಕುಟುಂಬದ ಪಾಲನೆ ಪೋಷಣೆಗಾಗಿ ಹೊರಗೆ ಬಂದು ತುಂಬಾ ಚುರುಕಿನಿಂದ ತನ್ನ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಉದಾ: ಮಂಗಳೂರಿನ ಜೀನತ್ ಕುಟುಂಬದಲ್ಲಿ ಅವಳ ಗಂಡ ಗಲ್ಫ್ ರಾಷ್ಟ್ರದಲ್ಲಿ ಇರುವ ಕಾರಣ ತನ್ನ ಐದು ಹೆಣ್ಣು ಮಕ್ಕಳ ಪಾಲನೆ ಪೋಷಣೆ ಮಾಡಿ, ಅವರ ವಿದ್ಯಾಭ್ಯಾಸದ ಕಾಳಜಿಯನ್ನು ವಹಿಸಿ, ತಾನು ತೊಡುತ್ತಿದ್ದ ಪರ್ದಾ ಪದ್ಧತಿಯನ್ನು ಬಿಟ್ಟು, ಮಕ್ಕಳನ್ನು ಒಳ್ಳೆಯ ರೀತಿಯ ಪ್ರಜೆಗಳನ್ನಾಗಿ ಮಾಡಿದ್ದಾರೆ. ಈಗ ಅವರ ನಾಲ್ಕು ಹೆಣ್ಣು ಮಕ್ಕಳು ಕೆಲಸದಲ್ಲಿದ್ದಾರೆ. ಎರಡು ಹೆಣ್ಣು ಮಕ್ಕಳ ಮದುವೆಯ

ಜವಾಬ್ದಾರಿಯನ್ನು ತಾನೇ ನಿರ್ವಹಿಸಿ ಗಂಡ ಮದುವೆಯ ಎರಡು ದಿನ ಮೊದಲು ಊರಿಗೆ ಬರುತ್ತಿದ್ದರು. ಮದುವೆಯ ಸಡಗರಕ್ಕೆ ಮಾಡಬೇಕಾದ ಎಲ್ಲಾ ವ್ಯವಸ್ಥೆಯನ್ನು ತಾನು ಅಚ್ಚುಕಟ್ಟಾಗಿ ಮಾಡಿ ಮುಗಿಸಿದ್ದರು. ಗಂಡನಿಗೆ ಮದುವೆಯ ಯಾವುದೇ ತಲೆಬಿಸಿ ಇರಲಿಲ್ಲ. ಈ ಜೀನತ್ ಮನೆಯಂತೆ ಎಷ್ಟೋ ಬ್ಯಾರಿ ಮಹಿಳೆಯರು ಕುಟುಂಬದ ಒಳಗೆ ಮಾತ್ರ ಸೀಮಿತವಾಗಿದ್ದವರು ಕುಟುಂಬದ ಹೊರಗಿನ ವ್ಯವಹಾರವನ್ನು ನೋಡಿಕೊಳ್ಳುವಷ್ಟು ಬ್ಯಾರಿ ಕುಟುಂಬದಲ್ಲಿ ಬದಲಾವಣೆಯಾಗಿದೆ.

ಹಿಂದೆ ಬ್ಯಾರಿ ಕುಟುಂಬದಲ್ಲಿ ಗಂಡು ಮಕ್ಕಳಿಗೆ ಹೆಚ್ಚು ಪ್ರಾಮುಖ್ಯತೆ ಮತ್ತು ಸ್ವಾತಂತ್ರ್ಯ ಇದ್ದಿತು. ಮನೆಗೆ ಯಾರಾದರೂ ಬಂದರೂ ಹೆಣ್ಣು ಮಕ್ಕಳು ಅವರೊಡನೆ ಮಾತನಾಡುವ ಹಕ್ಕಿರಲಿಲ್ಲ. ರೂಮಿನ ಒಳಗೆ ಕೂತುಕೊಳ್ಳಬೇಕು. ಮದುವೆಯಾದ ಹೆಣ್ಣು ಮಕ್ಕಳೂ ತಮ್ಮ ಮೈದುನನೊಡನೆ ಮಾತನಾಡುವ ಸ್ವಾತಂತ್ರ್ಯವಿರಲಿಲ್ಲ. ಮದುವೆಯ ದಿನ (ನಿಕಾ) ದಾರೆಯಾಗುವ ತನಕ ರೂಮಿನ ಒಳಗೆ ಬಿಳಿ ಬಟ್ಟೆ ಧರಿಸಿ ಮುಖ ಮುಚ್ಚಿ ಕುಳಿತುಕೊಳ್ಳಬೇಕಾಗಿತ್ತು. ಅಷ್ಟೇ ಅಲ್ಲದೆ ಹೆಣ್ಣುಮಕ್ಕಳು ಹೊರಗೆ ಹೋಗಬೇಕಾದರೆ ಅವಳ ತಂದೆಯೋ, ಅಣ್ಣನೋ ಅಥವಾ ತಮ್ಮನೋ ಜೊತೆಯಲ್ಲಿ ಹೋಗಬೇಕಾಗಿತ್ತು. ವಿದ್ಯಾಭ್ಯಾಸದಲ್ಲೂ ಹೆಣ್ಣಿಗೆ ತಾನೂ ವಿದ್ಯಾವಂತಳಾಗುವ ಅವಕಾಶದಿಂದಲೂ ವಂಚಿತಳಾಗಿದ್ದಳು. ಆದರೆ ಕಾಲ ಬದಲಾದಂತೆ ಬ್ಯಾರಿ ಹೆಣ್ಣು ಮಕ್ಕಳ ಸ್ಥಾನಮಾನ ಬದಲಾಗಿದೆ. ಬ್ಯಾರಿ ಹೆಣ್ಣು ಮಕ್ಕಳೂ ಒಬ್ಬಂಟಿಗಳಾಗಿ ಶಾಲೆ, ಕಾಲೇಜಿಗೆ ಹೋಗಿ ಬರುತ್ತಾರೆ. ಮನೆಯಲ್ಲಿ ಯಾರಾದರೂ ಬಂದರೂ ಅವರನ್ನು ಉಪಚರಿಸಿ, ಅವರೊಡನೆ ಮಾತನಾಡುವವಳೂ ಬ್ಯಾರಿ ಹುಡುಗಿಯರೇ, ಬುರ್ಕಾ ಹಾಕಿಕೊಂಡು ಹಲವಾರು ಕ್ಷೇತ್ರದಲ್ಲಿ ಮುಂದುವರಿಯುತ್ತಿದ್ದಾರೆ. ಉದ್ಯೋಗವನ್ನು ಮಾಡುತ್ತಿದ್ದಾರೆ. ಉದಾ: ಕಾರ್ನಾಡಿನ ರಶೀದ ಕುಟುಂಬದ ಸದಸ್ಯಳಾದ ಪರ್‌ವೀನ್ ಎಂಬವಳು ರಶೀದವರ ಮೂರನೇ ಮಗಳು. ಇವಳು ಪದವಿ ಪೂರ್ವ ಶಿಕ್ಷಣ ಪಡೆದು ಬಜ್ಪೆ ವಿಮಾನ ನಿಲ್ದಾಣದಲ್ಲಿ ಟಿಕೆಟ್ ಕೊಡುವ ಕೌಂಟರಿನಲ್ಲಿ ಕೆಲಸ ಮಾಡುತ್ತಿದ್ದಳು. ಈಗ ದುಬೈ ವಿಮಾನ ನಿಲ್ದಾಣದಲ್ಲಿ ರಿಸೆಪ್ಷನಿಸ್ಟ್ ಆಗಿ ಕೆಲಸ ಮಾಡುತ್ತಿದ್ದಾಳೆ. ಬುರ್ಖಾ ಹಾಕಿಕೊಂಡೇ ತಾನು ಒಂದು ಕಡೆಯಿಂದ ಇನ್ನೊಂದು ಕಡೆಗೆ

ಸ್ವತಂತ್ರವಾಗಿ ಹೋಗುತ್ತಿದ್ದಾಳೆ. ಇದೇ ರೀತಿ ಮಂಗಳೂರಿನ ಶಬನ ಎಂಬವಳು ಸೌದಿ ಅರೇಬಿಯಾದ ಎಕ್ಸ್‌ಪೋರ್ಟ್ ಕಂಪೆನಿಯಲ್ಲಿ ಕೆಲಸ ಮಾಡುತ್ತಿದ್ದಾಳೆ. ಇವಳು ಕೂಡ ಮದುವೆಯ ಮೊದಲೇ ಗಲ್ಫ್ ರಾಷ್ಟ್ರದಲ್ಲಿ ಉದ್ಯೋಗ ಮಾಡುವುದೆಂದರೆ ನಿಜವಾಗಿಯೂ ಬ್ಯಾರಿ ಕುಟುಂಬದಲ್ಲಿ ಎಷ್ಟು ಬೇಗ ಬದಲಾವಣೆಯಾಗಿದೆ ಎಂದು ತಿಳಿಯಬಹುದಾಗಿದೆ. ಈ ಕಾಲದಲ್ಲಿ ಬ್ಯಾರಿ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳನ್ನೇ ಎಲ್ಲಾ ಕ್ಷೇತ್ರದಲ್ಲೂ ಕಾಣಬಹುದು. ಅವಳಿಗೆ ಹಿಂಬಾಲಕರಾಗಿರುವ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳು ಸಮಾಜದಲ್ಲಿ ಸ್ಥಾನಮಾನವನ್ನು ಪಡೆಯುತ್ತಿದ್ದಾರೆ. ಹಿಂದಿನಕಾಲದಲ್ಲಿ ಬ್ಯಾರಿ ಕುಟುಂಬದ ಸದಸ್ಯರೆಲ್ಲರೂ ಒಂದೇ ಮನೆಯಲ್ಲಿ ವಾಸವಾಗಿದ್ದರು, ಆದರೆ ಈಗ ಕುಟುಂಬದ ಸದಸ್ಯರು ಬೇರೆ ಬೇರೆ ಮನೆಮಾಡಿ ವಾಸಿಸುತ್ತಾರೆ.

ಆದರೂ ಕುಟುಂಬ ಸದಸ್ಯರಲ್ಲಿ ಪ್ರೀತಿ ಕಡಿಮೆಯಾಗುವುದಿಲ್ಲ. ಬಡತನವಿದ್ದರೂ ಸಾಲಮಾಡಿಯಾದರೂ, ಮನೆಯಲ್ಲಿ ಕಾರ್ಯಕ್ರಮವನ್ನು, ಇತರ ಆಚರಣೆಗಳನ್ನು ಸಡಗರ ಸಂಭ್ರಮದಿಂದ ಕುಟುಂಬದ ಸದಸ್ಯರನ್ನು ಮತ್ತು ಸಂಬಂಧಿಕರನ್ನು ಕರೆದು ಆಚರಣೆ ಮಾಡುತ್ತಾರೆ. ಉದಾ : ಇಮಾಮ್ ಹಳೆಯಂಗಡಿಯವರು ಬಡತನದಿಂದ ಕಾಲಕಳೆಯುತ್ತಿದ್ದಾರೆ. ಆದರೂ ತನ್ನ ಮಕ್ಕಳ ಮದುವೆಯ ನಂತರದ ಸಂಭ್ರಮಗಳನ್ನು ಬಹಳ ವಿಜೃಂಭಣೆಯಿಂದ ಮಾಡುತ್ತಾರೆ. ಅವರ ಮೊಮ್ಮಕ್ಕಳ ಹುಟ್ಟಿದ ಹಬ್ಬವನ್ನು, ಮುಂಜಿಮದುವೆಯನ್ನು ಇಡೀ ಕುಟುಂಬದ ಸದಸ್ಯರನ್ನೆಲ್ಲಾ ಕರೆದು ಸಂಭ್ರಮದಿಂದ ಆಚರಿಸುತ್ತಿದ್ದರು. ಇದು ಬ್ಯಾರಿ ಕುಟುಂಬದಲ್ಲಿರುವ ಸೋದರತೆ, ಬಾತೃತ್ವ, ಪ್ರೀತಿ, ವಾತ್ಸಲ್ಯಗಳನ್ನು ತೋರಿಸುತ್ತದೆ.

ಬ್ಯಾರಿ ಕುಟುಂಬದಲ್ಲಿ ಮದುವೆಯಾದ ಸ್ತ್ರೀಯು ತನ್ನ ಗಂಡನ ಮನೆಯಲ್ಲಿ ಎಲ್ಲಾ ರೀತಿಯ ಹಕ್ಕನ್ನು ಪಡೆಯುತ್ತಾಳೆ ಗಂಡ ಗಲ್ಫ್ ರಾಷ್ಟ್ರದಲ್ಲಿ ಉದ್ಯೋಗಿಯಾಗಿದ್ದರೆ, ಮದುವೆಯ ನಂತರ ಹೆಚ್ಚಿನ ಬ್ಯಾರಿ ಮಹಿಳೆಯರು ತಮ್ಮ ತಾಯಿ ಮನೆಯಲ್ಲೇ ವಾಸವಾಗಿರುತ್ತಾರೆ. ಆದರೆ ಕೆಲವರ ಮನೆಯಲ್ಲಿ ಇದಕ್ಕೆ ವಿರುದ್ಧವಾದ ರೀತಿಯಲ್ಲೂ ಇರಬಹುದು ಉದಾ: ಮಂಗಳೂರಿನ ಜಪ್ಪುವಿನ ರಫೀಕ್‌ಗೆ ಜರೀನಾ ಎಂಬ ಹುಡುಗಿಯೊಡನೆ ಮದುವೆಯಾಗುತ್ತದೆ. ರಫಿಕ್ ಗಲ್ಫ್ ರಾಷ್ಟ್ರದಲ್ಲಿ ಉದ್ಯೋಗಸ್ಥ, ಮದುವೆಯಾದ ಮೂರು ತಿಂಗಳ ನಂತರ ಅವನು ಗಲ್ಫ್ ರಾಷ್ಟ್ರಕ್ಕೆ

ತೆರಳಿದ, ಆಗ ಅವನ ತಂದೆ, ಅಂದರೆ ಜರೀನಳ ಮಾವ, ಅತ್ತೆಯನ್ನು ನೋಡಿಕೊಳ್ಳಲಿಕ್ಕೆ ಅವಳನ್ನು ಗಂಡನ ಮನೆಯಲ್ಲಿ ಇರಬೇಕೆಂದು ಹೇಳಿದರು. ಆದರೆ ಅವಳು ಒಪ್ಪುವ ಪರಿಸ್ಥಿತಿಯಲ್ಲಿ ಇರಲಿಲ್ಲ. ಏಕೆಂದರೆ ಅತ್ತೆಗೆ ಮೈ ಹುಷಾರಿಲ್ಲದೆ ಹೆಚ್ಚಿನ ಕಾಲ ಹಾಸಿಗೆಯಲ್ಲೇ ಕಳೆಯುತ್ತಾರೆ. ಆದುದರಿಂದ ಮಾವನಾದವನು ತನ್ನ ಶೀಲವನ್ನು ಕೆಡಿಸಿದರೆ ಏನು ಮಾಡುವುದು ಎಂಬ ಯೋಚನೆಯಿಂದ ಗಂಡನ ಮನೆಯಲ್ಲಿ ವಾಸಿಸಲು ಅವಳು ಒಪ್ಪಲಿಲ್ಲ. ಕೋಪಗೊಂಡ ಮಾವ ಅವಳಿಗೆ ತಲೆಸರಿಯಿಲ್ಲ, ನನ್ನ ಮಗನಿಗೆ ಸರಿಯಾದ ಹುಡುಗಿಯಲ್ಲ ಎಂದು ಅವಳ ಮೇಲೆ ಧಾವೆ ಹೂಡಿದರು. ಅವಳು ತನ್ನ ಗಂಡನನ್ನು ಸಂಪರ್ಕ ಮಾಡಿದಾಗ, ಅವನೂ ಜರೀನಳಿಗೆ ತನ್ನ ತಾಯಿಯನ್ನು ನೋಡಿಕೊಂಡು ತನ್ನ ಮನೆಯಲ್ಲಿರುವಂತೆ ಆಜ್ಞೆ ಮಾಡಿದ, ಜರೀನಾಳ ತಾಯಿಯು ಇದಕ್ಕೆ ಒಪ್ಪದ ಕಾರಣ ಕೆಲವು ತಿಂಗಳ ನಂತರ ಅವಳ ವಿವಾಹ ವಿಚ್ಛೇದನಕ್ಕೆ ಹೋಗಿ, ವಿವಾಹ ಬಂಧನದಿಂದ ಹೊರಗೆ ದೂಡಲ್ಪಟ್ಟಳು. ಆದರೆ ಜರೀನ ಈಗ ತನ್ನ ಕಾಲ ಮೇಲೆ ನಿಂತು, ದುಡಿಯುವ ಮಹಿಳೆಯಾಗಿದ್ದಾಳೆ. ಇದೇ ರೀತಿ ಅದೆಷ್ಟೋ ಕುಟುಂಬಗಳಲ್ಲಿ ಜರೀನಳ ಹಾಗೆ ತೊಂದರೆಗೊಳಗಾದ ಬ್ಯಾರಿ ಸ್ತ್ರೀಯರು ಇರಬಹುದು.

ಬ್ಯಾರಿ ಕುಟುಂಬದ ವ್ಯವಸ್ಥೆಯಲ್ಲಿ ಬದಲಾಗದ ವಿಶೇಷತೆ ಏನೆಂದರೆ, ತಾಯಿ ತಂದೆಯರಿಗೆ ಎಷ್ಟು ಪ್ರಾಯವಾದರೂ ಎಷ್ಟು ಕಷ್ಟವಾದರೂ ತಮ್ಮೊಂದಿಗೇ ಇಟ್ಟುಕೊಂಡು ಅವರ ಪಾಲನೆಯನ್ನು ಮಗ ಮತ್ತು ಸೊಸೆ ಮಾಡುತ್ತಾರೆ. ಉದಾ: ಮನ್ಸೂರು ಹಳೆಯಂಗಡಿಯವರ ತಾಯಿಗೆ ಅರವತ್ತು ವರ್ಷ ತುಂಬಿದಾಗಲೇ ಅರಳು ಮರಳು ಶುರುವಾಗಿತ್ತು. ಆದರೆ ಮನ್ಸೂರವರ ಮದುವೆಯಾಗಿ ಮದುಮಗಳು ಮನೆಗೆ ಬಂದಾಗ ಅತ್ತೆಯ ವಿಷಯ ತಿಳಿಯಿತು. ಆದರೂ ಅವರಿಬ್ಬರು ಸೇರಿ ಅತ್ತೆಯನ್ನು ನೋಡಿಕೊಳ್ಳುತ್ತಿದ್ದರು. ಆರು ವರುಷದ ನಂತರ ಮನ್ಸೂರ್‌ನ ತಾಯಿಗೆ ಮರವಳಿಕೆ ಜಾಸ್ತಿಯಾಗಿ ಮಗ ಮತ್ತು ಸೊಸೆಯ ಪರಿಚಯ ಸಿಗದಂತಾಯಿತು. ಅಷ್ಟೆ ಅಲ್ಲದೆ ಮನೆಯಿಂದ ಹೊರಗೆ ಬಂದು ಎಲ್ಲೆಲ್ಲಿಗೋ ಹೋಗುತ್ತಿದ್ದರು ಮತ್ತು ಅವರನ್ನು ಹುಡುಕಿ ತರಲಾಗುತ್ತಿತ್ತು. ನಂತರ ಮನೆಯ ಒಂದು ಕೋಣೆಯಲ್ಲಿ ಹಾಕಿ ಅವರ ಪಾಲನೆ ಪೋಷಣೆ ಮಾಡುತ್ತಿದ್ದರು. ನಂತರ ಎರಡು ವರ್ಷ ಹಾಸಿಗೆಯಲ್ಲಿ ಮಲಗುವ ಪರಿಸ್ಥಿತಿಯುಂಟಾದರೂ, ಅವರನ್ನು ಚಿಕ್ಕ ಮಕ್ಕಳಂತೆ

ಉಪಚರಿಸಿ ಎತ್ತಿಕೊಂಡು ಹೋಗಿ ಸ್ನಾನ ಮಾಡಿಸಿ, ದಿನನಿತ್ಯದ ಕಾರ್ಯಗಳನ್ನು ಮಾಡಿ ಹೊತ್ತಿಗೆ ಸರಿಯಾಗಿ ಊಟ ತಿಂಡಿಯನ್ನು ಮಕ್ಕಳಿಗೆ ತಿನ್ನಿಸಿದ ಹಾಗೆ ತಿನ್ನಿಸುತ್ತಿದ್ದರು. ಎರಡು ವರ್ಷಗಳ ತನಕ ಮಲಗಿದಲ್ಲೇ ಆದ ತಾಯಿಯನ್ನು ಮಗ ಮತ್ತು ಸೊಸೆ ನೋಡಿಕೊಳ್ಳುತ್ತಿದ್ದ ರೀತಿಯನ್ನು ಬಣ್ಣಿಸಿದರೇ, ಬ್ಯಾರಿ ಕುಟುಂಬದಲ್ಲಿ ತಾಯಿ ತಂದೆಯರ ಸ್ಥಾನ ಯಾವತ್ತೂ ಕಡಿಮೆಯಾಗುವುದಿಲ್ಲ. ಇದೊಂದು ಬ್ಯಾರಿ ಕುಟುಂಬದ ವೈಶಿಷ್ಟ್ಯ. ಬೇರೆ ಸಮುದಾಯದವರ ಹಾಗೇ ಕರ್ತವ್ಯದಿಂದ ತಪ್ಪಿಸಿಕೊಂಡು ಆಶ್ರಮಕ್ಕೆ ಸೇರಿಸುವ ಹೀನ ಕೃತ್ಯವನ್ನು ಬ್ಯಾರಿ ಕುಟುಂಬದಲ್ಲಿ ಮಾಡುವುದಿಲ್ಲ. ಅಷೇ ಅಲ್ಲದೆ ಬ್ಯಾರಿಗಳಲ್ಲಿ ಯಾರೇ ಗತಿ ಹೀನರು ಬಂದರೂ ಅವರಿಗೆ ಊಟಕೊಟ್ಟು ಹಣ ಕೊಟ್ಟು ಸಂತೈಸುವ ಮಹಾಗುಣ ಹಿಂದೆಯೂ ಇತ್ತು, ಮತ್ತು ಈಗಲೂ ಕಾಣಬಹುದು.

ಬ್ಯಾರಿ ಕುಟುಬಂದಲ್ಲಿ ಈಗ ಹೆಣ್ಣು ಮಕ್ಕಳಿಗೆ ಶಿಕ್ಷಣವನ್ನು ಕೊಡಲು ಪ್ರತಿಯೊಂದು ಕುಟುಂಬ ಯೋಚಿಸುತ್ತಿದೆ ಯಾಕೆಂದರೆ ಹೆಣ್ಣುಮಕ್ಕಳಿಗೆ ವಿದ್ಯೆ ಕೊಟ್ಟರೆ, ಮುಂದೆ ಅವಳ ಬಾಳಿನಲ್ಲಿ ಏರು ಪೇರಾದರೆ, ಅವಳು ತನ್ನ ಕಾಲಮೇಲೆ ನಿಲ್ಲಬಹುದು. ಅದಕ್ಕೋಸ್ಕರ ಹೆಚ್ಚಿನ ಕುಟುಂಬದಲ್ಲಿ ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸ ಕೊಡುತ್ತಿದ್ದಾರೆ. ಕಲಿತ ಹೆಣ್ಣು ಮಕ್ಕಳಿಗೆ ವಿದ್ಯಾವಂತರಾದ ಗಂಡುಮಕ್ಕಳು ಸಿಗುವುದು ಕಷ್ಟಕರವಾಗಿದೆ.

ಬ್ಯಾರಿ ಕುಟುಂಬದ ಮದುವೆಯ ಸಮಾರಂಭದಲ್ಲೂ ಸಾಕಷ್ಟು ಬದಲಾವಣೆಯಾಗಿದೆ ಉದಾ: ಜೂನ್ ೨೫ನೇ ತಾರೀಖಿಗೆ ಶಮಾ ಎಂಬವಳ ಮದುವೆಗೆ ನಾನು ಹೋಗಿದ್ದೆ. ಆ ಮದುವೆ ಸಮಾರಂಭವನ್ನು ನೋಡಿ ನನಗೆ ಆಶ್ಚರ್ಯವಾಯಿತು. ಏಕೆಂದರೆ ಮದುವೆಯ ಮುಂಚಿನ ದಿನದ ಮೆಹೆಂದಿ ಸಮಾರಂಭಕ್ಕೆ ಹೋದಾಗ ಅಚ್ಚರಿ ಕಾದಿತ್ತು. ಬ್ಯಾರಿ ಮದುವೆಯಲ್ಲಿ ಹೆಂಗಸರು ಮತ್ತು ಗಂಡಸರು ಬೇರೆ ಬೇರೆಯಾಗಿ ಕೂತುಕೊಳ್ಳುವ ರೀತಿ ಇದೆ. ಆದರೆ ಮೆಹಂದಿಯ ದಿನ ಗಂಡಸರಿಗೂ, ಹೆಂಗಸರಿಗೂ ಒಟ್ಟಿಗೆ ಕುರ್ಚಿಗಳನ್ನು ಇಡಲಾಗಿದೆ. ಊಟದ ನಂತರ ಬ್ಯಾರಿ ಹುಡುಗಿಯರು ಹಾಡಿಗೆ ತಕ್ಕಂತೆ ಕುಣಿಯುತ್ತಿದ್ದರು. ಇದು ನನಗೆ ಆಶ್ಚರ್ಯವನ್ನುಂಟುಮಾಡಿತ್ತು. ಇಷ್ಟೊಂದು ಬದಲಾವಣೆ ಮತ್ತು ಬ್ಯಾರಿ ಹುಡುಗಿಯರ ಕುಣಿತ ಮೊದಲ ಬಾರಿ ಕಂಡ ಕಾರಣ. ಅವಳ ಮದುವೆಯ ದಿನದಂದೂ ಬಹಳ ಸಂತೋಷ ಪಟ್ಟೆ.

ಹಿಂದೆ ಮದುಮಗಳು ತಲೆತಗ್ಗಿಸಿ ಕೂತು, ಮುಖವನ್ನು ಶಾಲ್‌ನಿಂದ ಮುಚ್ಚಲಾಗುತ್ತಿತ್ತು. ಆದರೆ ಶಮಾ ತನ್ನ ಮದುವೆಯ ದಿನ ಶಾಲನ್ನು ಸರಿಸಿ ಎಲ್ಲರೊಂದಿಗೆ ಸಂತಸದಿಂದ ಮಾತನಾಡುತ್ತಿದ್ದಳು. ಹೀಗೆ ಬ್ಯಾರಿ ಹುಡುಗಿಯರು ವಿದ್ಯಾವಂತರಾದರೆ ಬ್ಯಾರಿ ಕುಟುಂಬ ಯಾವ ರೀತಿ ಮುಂದುವರಿಯಬಹುದೆಂದು ತೋರಿಸಿಕೊಟ್ಟಿತು. ಶೇಕಡಾ ೫೦ ಬ್ಯಾರಿ ಸಮುದಾಯ ವಿದ್ಯಾವಂತರಾದರೆ, ಸಮಾಜದಲ್ಲಿ ಬ್ಯಾರಿಗಳು ಹಿಂದುಳಿದವರು ಎಂದು ಹೇಳುವ ಆ ಪರಿಪಾಠ ಹೋಗಬಹುದು.

ಒಂದು ಹೇಳಿಕೆಯಿದೆ ಕುಟುಂಬ ಒಂದು ಬದಲಾದರೆ, ಸಮಾಜದ ಅಭಿವೃದ್ಧಿ ಸಾಧ್ಯ. ಬ್ಯಾರಿಗಳಲ್ಲೂ ಪಿತೃ ಮೂಲ ಕುಟುಂಬದಲ್ಲಿ ಈಗಲೂ ಹೆಣ್ಣು ಮತ್ತು ಗಂಡಿನ ಸ್ಥಾನದಲ್ಲಿ ತಾರತಮ್ಯವನ್ನು ಕಾಣಬಹುದು. ಗಂಡುಮಗ ಚಿಕ್ಕವನಾಗಿರುವಾಗಲೇ ಎಲ್ಲಾ ರೀತಿಯ ಸ್ವಾತಂತ್ರ್ಯವನ್ನು ಪಡೆದುಕೊಳ್ಳುತ್ತಾನೆ. ಹೆಣ್ಣುಮಕ್ಕಳಿಗೆ ಬಂಧನ. ಹೆಣ್ಣು ಮಕ್ಕಳು ವಿದ್ಯಾವಂತರಾದರೂ ಅವರ ಸ್ಥಾನಮಾನ ಯಾಕೆ ಉತ್ತಮಗೊಳ್ಳುವುದಿಲ್ಲ? ಇದಕ್ಕೆ ಕಾರಣ ಬ್ಯಾರಿ ಗಂಡಸರು. ಹೆಣ್ಣು ಮಕ್ಕಳಿಗೆ ಸ್ಥಾನ ಅಥವಾ ಸ್ವಾತಂತ್ರ್ಯ ಕೊಟ್ಟರೆ, ಅವರು ಗಂಡು ಮಕ್ಕಳಿಗಿಂತಾ ಮುಂದುವರಿಯುವರು ಎಂಬ ಭಯವಿರಬಹುದು. ಹೆಣ್ಣು ಮಗಳನ್ನು ಶಾಲೆಗೆ ಅಥವಾ ಕಾಲೇಜಿಗೆ ಕಳುಹಿಸುವಾಗ ಅವಳ ಅಣ್ಣ ಅಥವಾ ತಮ್ಮನನ್ನು ಜೊತೆಯಲ್ಲಿ ಕಳುಹಿಸಿಕೊಡುತ್ತಾರೆ. ಶಿಕ್ಷಣ ಪಡೆದ ಹೆಣ್ಣು ಮಕ್ಕಳು ಮದುವೆಯಾದ ನಂತರ, ಗಂಡನಾದವನು ಅವಳು ಉದ್ಯೋಗಮಾಡುವುದು ಇಷ್ಟ ಪಡುವುದಿಲ್ಲ. ಅವಳು ಮನೆ, ಗಂಡ ಮತ್ತು ಮಕ್ಕಳ ಆರೈಕೆಗೆ ಮಾತ್ರ ಸೀಮಿತಳು ಎಂಬ ಭಾವನೆ ಈಗಲೂ ಹೆಚ್ಚಿನ ಕುಟುಂಬಗಳಲ್ಲಿ ಕಾಣಬಹುದು. ಆದುದರಿಂದ ಬ್ಯಾರಿ ಕುಟುಂಬದಲ್ಲಿ ಹೆಣ್ಣಿನ ಸ್ಥಾನಮಾನದಲ್ಲಿ ಹೆಚ್ಚಿನ ಬದಲಾವಣೆಯಾಗಲಿಲ್ಲ. ಬ್ಯಾರಿ ಯುವಕರು ತಮ್ಮ ಹೆಂಡತಿಯರಿಗೆ ಸ್ವಾತಂತ್ರ್ಯ ಕೊಟ್ಟು ಅವರು, ಕುಟುಂಬದ ಹೊರಗೆ ಬಂದು ಸಮಾಜದಲ್ಲಿ ಸಮಾನತೆ ಪಡೆದುಕೊಳ್ಳಬೇಕೆಂದು ಭಾವಿಸಿದರೆ ಮಾತ್ರ ಸಾಧ್ಯ, ಇದು ಬ್ಯಾರಿ ಯುವಕರು ಮಾಡಬೇಕಾಗಿದೆ. ಈ ರೀತಿಯ ಬದಲಾವಣೆ ಬ್ಯಾರಿ ಮಹಿಳೆಯರಿಗೆ ಕನಸಾಗಿ ಉಳಿಯಬಹುದೇನೋ? ಬ್ಯಾರಿ ಕುಟುಂಬದಲ್ಲಿ ಒಗ್ಗಟ್ಟು ಮತ್ತು ಐಕ್ಯತೆ ಇದೆ. ತಂದೆ ತಾಯಿಗೆ ಗೌರವ ಸ್ಥಾನವಿದೆ, ತಂದೆ ತಾಯಿಯನ್ನು

ಮಗನಾದವನು ಒಳ್ಳೆಯ ರೀತಿಯಲ್ಲಿ ನೋಡಿಕೊಳ್ಳುತ್ತಾನೆ. ಕುಟುಂಬದ ಯಾವುದೇ ಸದಸ್ಯರು ತೊಂದರೆಯಲ್ಲಿದ್ದರೆ ಇತರ ಸದಸ್ಯರು ಅವರಿಗೆ ಸಹಾಯ ಮಾಡುತ್ತಾರೆ. ಇದು ಬ್ಯಾರಿ ಕುಟುಂಬದ ಮನೋಭಾವನೆ. ಯಾವುದೇ ಸಮಾರಂಭಕ್ಕೆ ಅಥವಾ ಮದ್ದಿಗಾಗಿ ಆಸ್ಪತ್ರೆಗೆ ಹೋಗಬೇಕಾದರೆ ಕುಟುಂಬ ಸಮೇತರಾಗಿ ಹೋಗುತ್ತಾರೆ. ಈ ಪದ್ದತಿಯು ಸುಃಖ ದುಃಖದಲ್ಲಿ ಪ್ರತಿಯೊಬ್ಬರು ಭಾಗಿಯಾಗಬೇಕೆಂಬುದು. ಬ್ಯಾರಿಗಳದ್ದು ಸರಳವಾದ ಜೀವನ ಪ್ರತಿಯೊಂದು ಸಂದರ್ಭದಲ್ಲೂ ಅಲ್ಲಾಹುವನ್ನು ನೆನಪಿಸುವ ಪರಿಪಾಠವಿದೆ. ಒಬ್ಬರನ್ನೊಬ್ಬರು ಭೇಟಿಯಾದಾಗ 'ಅಸ್ಸಾಲಾಂ ಅಲೈಕುಂ' ಎನ್ನುವುದು, ಓರ್ವ ಬ್ಯಾರಿ ಮೃತಪಟ್ಟರೂ, ಮೃತದೇಹವನ್ನು ಹೋಗಿ ಎಲ್ಲರೂ ನೋಡುವುದು ಸರ್ವೇ ಸಾಮಾನ್ಯ. ಬ್ಯಾರಿ ಕುಟುಂಬ ಶಿಕ್ಷಣದಲ್ಲಿ ಹಿಂದೆ ಬೀಳಲು ಲೌಕಿಕ ಮತ್ತು ಧಾರ್ಮಿಕ ಶಿಕ್ಷಣ ಒಂದೇ ಕಡೆ ಸಿಗದೆ ಇರುವುದು. ಧಾರ್ಮಿಕ ಶಿಕ್ಷಣ ನೀಡುವ ಹಜ್ರತ್‌ಗೆ ಲೌಕಿಕ ಶಿಕ್ಷಣ ಪಡೆಯಲು ಕಡ್ಡಾಯ ಮಾಡಬೇಕು. ಇಲ್ಲದಿದ್ದರೆ ಅವರು ಧರ್ಮದ ಬಗ್ಗೆ ಒಂದೇ ದೃಷ್ಟಿಕೋನವಿಟ್ಟು ಮಕ್ಕಳಿಗೆ ಶಿಕ್ಷಣ ನೀಡುತ್ತಾರೆ. ಅವರು ಲೌಕಿಕ ಶಿಕ್ಷಣ ಪಡೆದರೆ, ಪ್ರಾಪಂಚಿಕ ಜ್ಞಾನ ಮತ್ತು ಧಾರ್ಮಿಕ ಜ್ಞಾನವನ್ನು ಪಡೆದ ಅವರು ಮಕ್ಕಳಿಗೆ ಒಳ್ಳೆಯ ಜ್ಞಾನವನ್ನು ಕೊಡಬಲ್ಲರು ಎಂಬುದು ನನ್ನ ಅಭಿಪ್ರಾಯ. ಧಾರ್ಮಿಕ ಶಿಕ್ಷಣವನ್ನು ತಿಳಿಯಪಡಿಸಬೇಕೆ ಹೊರತು, ಹೊಡೆದು ಬಡಿದು ಕಡ್ಡಾಯ ಮಾಡಿದರೆ, ಮಕ್ಕಳ ಶಾರೀರಿಕ, ಮಾನಸಿಕ ಮತ್ತು ಬೌದ್ಧಿಕತೆಯ ಮೇಲೆ ವಿಪರೀತ ಹೊರೆ ಬೀಳುತ್ತದೆ. ಬ್ಯಾರಿ ಕುಟುಂಬಕ್ಕೆ ಸರಿಯಾಗಿ ವಿದ್ಯೆ ಸಿಗದಿರಲು ಕಾರಣ, ಅವರ ಆರ್ಥಿಕ ಪರಿಸ್ಥಿತಿ. ಕಳೆದ ಹತ್ತು ವರ್ಷದಿಂದ ಬ್ಯಾರಿಗಳು ಲೌಕಿಕ ಶಿಕ್ಷಣ ರಂಗದತ್ತ ಆಸಕ್ತಿ ವಹಿಸಿದರೂ ಬ್ಯಾರಿ ಕುಟುಂಬಗಳು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಇದನ್ನು ಯಾವ ರೀತಿ ಹೋಗಲಾಡಿಸಬಹುದೆಂದರೆ ಪ್ರತಿಯೊಂದು ಬ್ಯಾರಿ ಕುಟುಂಬಗಳು ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡಬೇಕು. ಬ್ಯಾರಿ ಹುಡುಗರು ಮತ್ತು ಹುಡುಗಿಯರ ವಿಧ್ಯಾಭ್ಯಾಸಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟರೆ, ಬ್ಯಾರಿ ಸಮುದಾಯವು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಮತ್ತು ಆರ್ಥಿಕವಾಗಿ ಮುಂದುವರಿಯುವುದರಲ್ಲಿ ಸಂಶಯವೇ ಇಲ್ಲ. ಆಧುನಿಕ ಕಾಲದಲ್ಲಿ ಬ್ಯಾರಿ ಕೌಟುಂಬಿಕ ಬದಲಾವಣೆಗಳನ್ನು ಕಾಣಬಹುದು. ಗಲ್ಫ್

ರಾಷ್ಟ್ರಕ್ಕೆ ಹೋಗುವ ಕಾರಣ, ಕುಟುಂಬದ ಎಲ್ಲಾ ಜವಾಬ್ದಾರಿಯನ್ನು ಮಹಿಳೆಯರೇ ವಹಿಸುತ್ತಿದ್ದಾರೆ. ಮಕ್ಕಳ ವಿದ್ಯಾಭ್ಯಾಸ, ಅಡಿಗೆ, ಹಿರಿಯರ ಪಾಲನೆ ಪೋಷಣೆ ಎಲ್ಲವೂ ಇವರ ಕೈಯಲ್ಲಿರುವುದು. ಕೆಲವು ಕುಟುಂಬಗಳನ್ನು ನೋಡಿದಾಗ ಆರ್ಥಿಕವಾಗಿಯೂ ಮತ್ತು ಸ್ವತಂತ್ರವಾಗಿ ಸಮಾಜದಲ್ಲಿ ಮುಂದುವರಿದಿದೆ. ಆದರೆ ಕೆಲವು ಪ್ರದೇಶಗಳಾದ, ಉಳ್ಳಾಲ, ತಲಪಾಡಿ, ಕೃಷ್ಣಾಪುರ, ಕಾಟಿ ಪಳ್ಳಗಳಲ್ಲಿ ಹಲವಾರು ಕುಟುಂಬಗಳು ಹಿಂದುಳಿದಿದೆ, ಇವರುಗಳೂ ಶೈಕ್ಷಣಿಕವಾಗಿ ಮುಂದುವರಿದರೆ ಕೌಟುಂಬಿಕ ಬದಲಾವಣೆಯಾಗಬಹುದು. ಬ್ಯಾರಿ ಹೆಣ್ಣು ಮಕ್ಕಳಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡಿದರೆ ಕೌಟುಂಬಿಕ ಸ್ಥಿತಿಗಳು ಪ್ರಗತಿಯತ್ತ ಸಾಗಬಹುದು.

# ಅಧ್ಯಾಯ ಆರು

# ಶೋಧನದ ಫಲಿತ

ದಕ್ಷಿಣಕನ್ನಡ ಜಿಲ್ಲೆಯು, ಕರಾವಳಿ ಕರ್ನಾಟಕದ ಒಂದು ಜಿಲ್ಲೆ. ಈ ಜಿಲ್ಲೆಗೆ ಭವ್ಯ ಪರಂಪರೆ ಇದೆ, ದೀರ್ಘ ಇತಿಹಾಸ ಇದೆ. ತುಳುನಾಡು ಬ್ಯಾರಿ ಸಮುದಾಯಕ್ಕೆ ಜನ್ಮವಿತ್ತ ನಾಡು. ಅಂದಾಜು ೧೨೦೦ ವರ್ಷಗಳ ಇತಿಹಾಸವಿರುವ ಬ್ಯಾರಿ ಜನಾಂಗ ಭಾಷೆ, ಧಾರ್ಮಿಕ ಹಾಗೂ ಸಾಂಸ್ಕೃತಿಕ ರಂಗದಲ್ಲಿ ತನ್ನದೇ ಆದ ಛಾಪು ಬೆಳೆಸಿದೆ. ಒಂದು ಕಾಲಕ್ಕೆ ಅತ್ಯಂತ ವೈಭವಯುತವಾಗಿ ಮೆರೆದ ಬ್ಯಾರಿ ಜನಾಂಗ ನಂತರ ಕಾಲದ ಹೊಡೆತಕ್ಕೆ ಬಲಿಯಾಗಿ ಕ್ಷೀಣಿಸಿದರೂ ಕೂಡಾ ಇತ್ತೀಚೆಗೆ ಮತ್ತೆ ತನ್ನ ಭಾಷೆ, ಸಂಸ್ಕೃತಿ ಸಹಿತ ವಿವಿಧ ರಂಗದಲ್ಲಿ ಅಭಿವೃದ್ಧಿ ಪಥದತ್ತ ಸಾಗುತ್ತಿದೆ. ಬ್ಯಾರಿ ಎಂಬ ಪದ ಯಾವಾಗ, ಎಲ್ಲಿ, ಹೇಗೆ ಉತ್ಪತ್ತಿಯಾಯಿತು ಎಂಬ ಪ್ರಶ್ನೆಗೆ ಬಹರಿ ಅಥವಾ ಬೆಹಾರಿ ಎಂಬ ಪದರಿಂದ 'ಬ್ಯಾರಿ' ಎಂಬ ಶಬ್ದ ಬಳಕೆಗೆ ಬಂತೆಂಬ ಅಭಿಪ್ರಾಯವಿದೆ. ಆದರೆ ದೇಶದ ಕನ್ಯಾಕುಮಾರಿಯಿಂದ ಉತ್ತರ ಗುಜಾರಾತಿನವರೆಗೂ ಸಮುದ್ರ ಕಿನಾರೆಯಲ್ಲಿ ಮುಸ್ಲಿಮರು ನೆಲೆಸುತ್ತಿದ್ದು ಅವರು ಮೂಲತಃ ಸಮುದ್ರ ಯಾನಿಗಳೆಂದು ಅಂದರೆ ಅರಬರೆಂದು ಒಪ್ಪಿಕೊಂಡ ಮೇಲೆ ದಕ್ಷಿಣಕನ್ನಡ ಜಿಲ್ಲೆಯ ಒಂದು ಸೀಮಿತ ಕರಾವಳಿ ಪ್ರದೇಶದ ಮುಸ್ಲಿಮರಿಗೆ 'ಬ್ಯಾರಿ' ಎಂಬ ಹೆಸರು ಬಂತು. ಇನ್ನೊಂದು ಅಭಿಪ್ರಾಯದಂತೆ ಕೇರಳದ ಮಲಪ್ಪುರಂ ಜಿಲ್ಲೆಯಿಂದ ಉತ್ತರಕ್ಕೆ 'ಮಲಬಾರ್' ಎಂಬ ಹೆಸರಿದೆ. ಅರಬರು ಕೂಡ ಈ ಪ್ರದೇಶವನ್ನು ಮಲಬಾರಿ ಎಂದೇ ಕರೆಯುತ್ತಿದ್ದರು. ಈ ಪ್ರದೇಶಕ್ಕೆ ಹತ್ತಿರವಾಗಿರುವ ದಕ್ಷಿಣ ಕನ್ನಡ ಜಿಲ್ಲೆಗೆ ಮಲಬಾರಿನ ಮುಸಲ್ಮಾನರು ವಲಸೆ ಬಂದು ನೆಲೆಸಿರುವ ಸಾಧ್ಯತೆ ಇದೆ. ಹಾಗೆ ಬಂದ ಮಲಬಾರಿ ಮುಸಲ್ಮಾನರನ್ನು 'ಬ್ಯಾರಿಗಳು ಎಂದು ತುಳುವರು ಸಂಭೋಧಿಸಿರಬಹುದು. ಆದರೆ ಬ್ಯಾರಿ ಎಂಬ ಪದ ಬಳಕೆಯು ಕೇವಲ ತುಳುನಾಡಿನಲ್ಲಿ ಮಾತ್ರ ಕಂಡು ಬಂದ ಕಾರಣ ಮತ್ತು 'ಬ್ಯಾರವನ್ನೇ' ನೆಚ್ಚಿಕೊಂಡ ಜನರನ್ನು

ತುಳುವರು 'ಬ್ಯಾರಿಗಳು' ಎಂದು ಕರೆದಿರುವ ಸಾಧ್ಯತೆಗಳೂ ಇವೆ. 'ಬ್ಯಾರಿ' ಎಂದರೆ ಸೃಷ್ಟಿಕರ್ತ ಎಂಬ ಅರ್ಥವೂ ಇದೆ. 'ಬ್ಯಾರಿ' ಎಂಬ ಪದವು ಬ್ಯಾರಿ ಭಾಷೆಯನ್ನು ಆಡುವವರಿಗೆ ಮಾತ್ರ ಇಡಲಾಗಿದೆ. ಉರ್ದು ಮಾತನಾಡುವ ಮುಸಲ್ಮಾನರಿಗೆ ಬ್ಯಾರಿಗಳೆಂದು ಕರೆಯುವುದಿಲ್ಲ. ಬ್ಯಾರಿ ಎಂಬುದು ಯಾವ ಆಧಾರದ ಮೇಲೆ ಗುರುತಿಸಿಕೊಳ್ಳಬೇಕೆಂಬ ಪ್ರಶ್ನೆ ಹುಟ್ಟಿಕೊಳ್ಳುವುದು ಸಹಜ. ಹಲವರ ಪ್ರಕಾರ 'ಬ್ಯಾರ' ಮಾಡುವವರೇ ಬ್ಯಾರಿಗಳು, ಆದರೆ ಬ್ಯಾರ ಮಾಡುವ ಇತರ ಸಮುದಾಯದವರು ಬ್ಯಾರಿಗಳು ಯಾಕಾಗಲಿಲ್ಲ? ಹಿಂದೆ ಬ್ಯಾರಿ ಎಂಬ ಪದದ ಬಳಸುವಿಕೆ ಅವಮಾನಕರವೆಂದು ತಿಳಿಯಲಾಗುತ್ತಿತ್ತು. ಆದರೆ ಇತ್ತೀಚಿಕೆಗೆ ಇದೇ ಪದವನ್ನು ಹೆಮ್ಮೆಯಿಂದ ಹೇಳಲಾಗುತ್ತಿದೆ. ಬ್ಯಾರಿ ಭಾಷೆಗೆ ಲಿಪಿ ಇಲ್ಲ ಯಾಕೆಂದರೆ ಬ್ಯಾರಿಗಳ ಪವಿತ್ರ ಗ್ರಂಥವಾದ ಕುರಾನ್ ಕೂಡಾ ಅರಬಿ ಲಿಪಿಯಲ್ಲಿದೆ. ಆದರೆ ಪ್ರೊ.ಬಿ.ಎಂ. ಇಚ್ಲಂಗೋಡುರವರು ಬ್ಯಾರಿ ಭಾಷೆಗೆ ಲಿಪಿ ಇದೆ ಅದರ ಸಂಶೋಧನೆಯಾಗಬೇಕು ಎಂದಿದ್ದಾರೆ. ಆದರೆ ಅದು ಬ್ಯಾರಿ ಲಿಪಿಯಾಗದೆ, ಅರಬರು ಕರಾವಳಿಯಲ್ಲಿ ನೆಲೆನಿಂತ ಕಾರಣ, ಕೆಲವು ಬ್ಯಾರಿಗಳು ಅರಬ್ ಲಿಪಿಯನ್ನು ಕಲಿತು ಬಳಸಿರಬಹುದು. ಈಗಲೂ ಬ್ಯಾರಿಗಳು ಅರಬ್ ಲಿಪಿ, ಕ್ರಮ, ಪದ್ಧತಿಗಳನ್ನು ಜೀವನದಲ್ಲಿ ಅಳವಡಿಸಿ ಕೊಂಡಾಗ ಅದು ಬ್ಯಾರಿ ಲಿಪಿಯಾಗಿರಲು ಸಾಧ್ಯವಿಲ್ಲ. ಬ್ಯಾರಿ ಭಾಷೆಗೆ ಲಿಪಿಯೇ ಇಲ್ಲ. ಬ್ಯಾರಿ ಭಾಷೆಯ ಲಿಪಿಯ ಮೇಲೆ ಹಲವಾರು ವಾದ ವಿವಾದಗಳಾಗಿವೆ. ಬ್ಯಾರಿ ಭಾಷೆ ಮಲಯಾಳಂನ ಉಪಭಾಷೆ ಎಂಬ ನಂಬಿಕೆ ಹಲವರಲ್ಲಿದೆ. ಆದರೆ ಇದೊಂದು ಸ್ವತಂತ್ರ ಭಾಷೆ. ಬ್ಯಾರಿ ಭಾಷೆಯು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗಿದೆ. ಬ್ಯಾರಿ ಭಾಷೆಯು ತುಳು ವ್ಯಾಕರಣ ಶೈಲಿಯನ್ನೇ ಹೋಲುತ್ತದೆ. ಇದರಲ್ಲಿ ಶೇಕಡಾ ೫೦ರಷ್ಟು ಪದಗಳು ತುಳು ಭಾಷೆಯದ್ದೇ ಆಗಿವೆ. ಬ್ಯಾರಿ ಭಾಷೆಯನ್ನು 'ನಕ್ಕ್ ನಿಕ್ಕ್, ಮೈಕಾಲ್ತೆ ಭಾಷೆ, ಮಾಪ್ಲಾ ಭಾಷೆ, ಮಂಗಳೂರು ಮಲಯಾಲಂ, ಮಾಮಾಲಿ' ಇತ್ಯಾದಿಯಾಗಿ ಬ್ಯಾರಿಗಳ ಸಹಿತ ಅನ್ಯರು ಗುರುತಿಸಿದ್ದುಂಟು. ಆದರೆ ಇದೀಗ ಬ್ಯಾರಿಗಳು ತಮ್ಮ ಭಾಷೆಯನ್ನು ಬ್ಯಾರಿ ಭಾಷೆ ಎಂದು ಗುರುತಿಸುತ್ತಾರಲ್ಲದೆ, ಬ್ಯಾರಿಗಳು ಎಂದು ಕರೆಯಲು ಹೆಮ್ಮೆ ಪಡುತ್ತಾರೆ. ಬ್ಯಾರಿಗಳು ಇಸ್ಲಾಂ ಧರ್ಮಾವಲಂಬಿಗಳಾಗಿದ್ದರೂ ಕೂಡಾ

ಅವರ ಸಂಸ್ಕೃತಿಯಲ್ಲಿ ತುಳು ಸಂಸ್ಕೃತಿ ಎದ್ದು ಕಾಣುತ್ತದೆ. ಕೆಲವು ಆಚಾರ ವಿಚಾರಗಳು ಧರ್ಮಕ್ಕೆ ವಿರುದ್ಧವಾಗಿದ್ದರು ಕೂಡಾ ಅದನ್ನು ತಮ್ಮ ಸಂಸ್ಕೃತಿ ಎಂದು ಸ್ವೀಕರಿಸಿರುವುದು ಕಂಡು ಬರುತ್ತದೆ.

ಹಬ್ಬಗಳು ಹಲವು ಬಗೆಯದಾದರೂ ವ್ಯಕ್ತಿಯ ಮನಸ್ಸಿಗೆ ಉಲ್ಲಾಸವನ್ನು ಕೊಡುವುದು ನಿಸ್ಸಂಶಯ. ಹಬ್ಬಗಳ ಆಚರಣಾ ವಿಧಿಗಳು ಆಯಾ ಧರ್ಮದ ತಿರುಳು ಹಾಗೂ ಸ್ಪೂರ್ತಿಯನ್ನು ಬಿಂಬಿಸುತ್ತದೆ. ಹಬ್ಬಗಳು ವರ್ತಮಾನದ ಭೀಕರತೆ ಹಾಗೂ ಭವಿಷ್ಯದ ಅನಿಶ್ಚಿತತೆಯ ನಡುವೆ ಡೋಲಾಯಮಾನವಾಗಿ ಓಲಾಡುವ ಮನಸ್ಸುಗಳಿಗೆ ತಂಪನ್ನೆರೆಯುತ್ತದೆ. ಬ್ಯಾರಿಗಳು ಆಚರಿಸುವ ಹಬ್ಬಗಳಿಗೆ ಅವುಗಳದೇ ಆದ ವೈಶಿಷ್ಟ್ಯವಿದೆ. ಶ್ರೀಮಂತರು ಬಡವರಿಗೆ ನೆರವಾಗುವ, ತನ್ಮೂಲಕ ಸಮಾಜದ ಎಲ್ಲಾ ವರ್ಗಗಳಲ್ಲೂ ಸಂತೋಷವನ್ನು ಹರಡುವ ದಿನಗಳಾಗಿವೆ. ಅತ್ಯಂತ ಮುಖ್ಯವಾಗಿ ಸೃಷ್ಟಿ ಕರ್ತನಾದ ಅಲ್ಲಾಹನನ್ನು ಸ್ತುತಿಸಿ, ಆತನ ಅಪಾರ ಅನುಗ್ರಹಗಳಿಗೆ ಕೃತಜ್ಞತೆಯನ್ನು ಸಲ್ಲಿಸುವುದಾಗಿದೆ. ಬ್ಯಾರಿ ಸಮುದಾಯದವರು ಆಚರಿಸುವ ಹಬ್ಬಗಳಲ್ಲಿ ವ್ಯಕ್ತಿ ಪೂಜೆ, ಮತ್ತು ಮೂರ್ತಿ ಪೂಜೆ ಇಲ್ಲ. ಇಸ್ಲಾಂ ಧರ್ಮದ ಪ್ರಕಾರ ಆಚಾರಿಸಬೇಕಾದ ಹಬ್ಬಗಳು ಎರಡೆ, ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿಗಳು ತುಳುನಾಡಿನ ಸಂಸ್ಕೃತಿಗೆ ಮಾರುಹೋಗಿ ಹಲವಾರು ಹಬ್ಬಗಳನ್ನು ಆಚರಿಸುತ್ತಾರೆ. ಈದುಲ್‌ಫಿತ್ರ್ ಮತ್ತು ಬಕ್ರೀದ್ ಧಾರ್ಮಿಕ ನೆಲೆಯಲ್ಲಿ ಆಚರಿಸಲು ಆದೇಶಿಸಲಾಗಿರುವ ಹಬ್ಬಗಳು. ಬ್ಯಾರಿಗಳು ವಿಭಿನ್ನ ಸಂಸ್ಕೃತಿಗಳಿಂದ ಪ್ರಭಾವಿತರಾಗಿ ಮೊಹರ್ರಮ್. ಮಿಲಾದುನ್ನಬಿ, ಶಬೆಬರಾತ್. ಶಬೆಮಿಅರಾಜ್ ಇತ್ಯಾದಿ ಹಬ್ಬಗಳ ಆಚರಣೆ ಮಾಡುತ್ತಾರೆ. ಕರ್ಬಲಾದ ಘಟನೆಯಿಂದ ತಿಳಿಯುವುದೇನೆಂದರೆ, ಹ. ಇಮಾಮ್ ಹುಸೈನ್‌ರು ಮಿಥ್ಯವನ್ನು ಸಹಿಸಿ ಸುಮ್ಮನಾಗಲಿಲ್ಲ. ಸತ್ಯಕ್ಕಾಗಿ ಸಂಘರ್ಷ ಮಾಡಿ ಹುತಾತ್ಮರಾದರು. ಇದು ಭ್ರಷ್ಟ ವ್ಯವಸ್ಥೆ ಮತ್ತು ದುಷ್ಟ ಆಡಳಿತದ ವಿರುದ್ಧ ಹೋರಾಡುವ ಮನೋಬಲವನ್ನು ವೃದ್ಧಿಸುತ್ತದೆ. 'ಈದ್ ಮಿಲಾದುನ್ನಬಿ' ಎಂದರೆ ಪ್ರವಾದಿ ಮಹಮ್ಮದರ ಜನ್ಮ ದಿನಾಚರಣೆ, ಆದರೆ ಅವರ ಜನನ ಅಥವಾ ಮರಣದಂತಹ ಘಟನೆಗಳನ್ನು ಹಬ್ಬದ ರೂಪದಲ್ಲಿ ಆಚರಿಸುವುದರಿಂದ ಅವರ ಜೀವನದ ಸಂದೇಶವು ಮರೆಯಾಗಿ ಅವರ ವ್ಯಕ್ತಿತ್ವದ

ವೈಭವೀಕರಣವಾಗಿ ಬಿಡುತ್ತದೆ. ಶಬೆಮಿಅರಾಜ್ ಎಂದರೆ 'ಮಿಅರಾಜ್'ನ ಘಟನೆ ನಡೆದ ರಾತ್ರಿ ಅದು ರಜಬ್ ತಿಂಗಳ ೨೨ನೇ ರಾತ್ರಿಯಾಗಿತ್ತು. ಅಲ್ಲಾಹನನ್ನು ಸ್ತುತಿಸುತ್ತಾ, ಪ್ರಶಂಸೆಯ ಗೀತೆಗಳನ್ನು ಹಾಡಲಾಗುತ್ತದೆ. ಅಂದು ರಾತ್ರಿ ಇಡೀ ಜಾಗರಣೆ ಮಾಡಿ ಪ್ರಾರ್ಥನೆ ಆರಾಧನೆಯಲ್ಲಿ ಕಾಲ ಕಳೆಯುತ್ತಾರೆ. ಆದರೆ ಈ ರೀತಿಯಾಗಿ ಹಬ್ಬದ ರೂಪದಲ್ಲಿ ಶಬೆ ಮಿಅರಾಜ್ ಆಚರಿಸಲ್ಪಟ್ಟದ್ದಕ್ಕೆ ಕುರಾನ್ ಮತ್ತು ಪ್ರವಾದಿ ಚರ್ಯೆಯಿಂದ ಯಾವುದೇ ಆಧಾರವಿಲ್ಲ. ಬಕ್ರೀದ್ ದಿನದಂದು ಬಲಿದಾನ ಕೊಡುವಷ್ಟು ಪುಣ್ಯ ಉಳಿದ ದಿನಗಳಲ್ಲಿ ಇರುವುದಿಲ್ಲ. ಬಲಿದಾನ ಮಾಡಿದ ನಂತರ ಮಾಂಸವನ್ನು ಮೂರು ಭಾಗಗಳಾಗಿ ಬೇರ್ಪಡಿಸಿ, ಮೊದಲನೆ ಭಾಗ ಸ್ವಂತಕ್ಕೆ, ಎರಡನೇ ಭಾಗ ಬಡವರಿಗೆ, ಮೂರನೆಯ ಭಾಗ ಶ್ರೀಮಂತರಿಗೆ ಹಂಚಬೇಕು. ಇತ್ತೀಚೆಗೆ ಈ ರೀತಿಯ ಪ್ರಾಮುಖ್ಯತೆಯನ್ನು ಮರೆತು ಬಲಿದಾನ ಮಾಂಸದ ಭಾಗವನ್ನು ಸ್ವಂತಕ್ಕೆ, ಸಂಬಂಧಿಕರಿಗೆ ಹಾಗೂ ನೆರೆಮನೆಯವರಿಗೆ ಹಂಚಲಾಗುತ್ತದೆ. ಹಾಗಾದರೆ ಬಕ್ರೀದ್ ಹಬ್ಬದ ಉಪಯುಕ್ತತೆಯ ನಾಶವಾಯಿತು. ಒಂದು ತಿಂಗಳ ಸತತ ಉಪವಾಸದ ನಂತರ 'ಶವ್ವಾಲ್' ತಿಂಗಳ ೧ನೇ ತಾರೀಕಿನಂದು ಆಚಾರಿಸಲಾಗುವ ಹಬ್ಬವೇ ಈದುಲ್‌ಫಿತ್ರ್. ಈ ಹಬ್ಬದ ಸಮಯದಲ್ಲಿ ಬಡಬಗ್ಗರಿಗೆ ನೀಡಲಾಗುವ 'ಫಿತ್ರ' ಎಂಬ ದಾನಕ್ಕೆ ಸಂಬಂಧಿಸಿದಂತೆ 'ಈದುಲ್ ಫಿತ್ರ್' ಎಂಬ ಹೆಸರು ಬಂದಿದೆ. ರಂಜಾನ್ ತಿಂಗಳ ಉಪವಾಸ ಹೊಟ್ಟೆಯ ಉಪವಾಸವಲ್ಲ, ಬದಲಿಗೆ ಅಂಗಾಂಗಗಳ ಉಪವಾಸ ಎಂದು ಕರೆಯಲಾಗಿದೆ. ಉಪವಾಸವು ಸಹನೆ ಮತ್ತು ತಾಳ್ಮೆಯ ಪಾಠವನ್ನು ನೀಡುತ್ತದೆ. ರಂಜಾನ್ ತಿಂಗಳಲ್ಲಿ 'ಝಕಾತ್' ಕೊಡುವ ಪರಿಪಾಠವಿದೆ. ಸಂಪತ್ತುಗಳಿಕೆಯನ್ನೇ ಗುರಿಯಾಗಿಟ್ಟುಕೊಂಡು ಜೀವನ ನಿರ್ವಹಿಸುವವರಿಗೆ ಸಂಪತ್ತಿನ ಮೋಹವನ್ನು ಕಳಚುವ ಆರಾಧನೆಯಾಗಿದೆ ಝಕಾತ್. ವೈಯಕ್ತಿಕವಾಗಿ 'ಝಕಾತ್' ಹಣ ವಿತರಿಸಿದರೆ ತುಂಬಾ ಅವಶ್ಯಕತೆಯುಳ್ಳ ಕೆಲವು ಜನರಿಗೆ ಅದು ಸಿಗದೆ ಹೋಗಬಹುದು ಆದುದರಿಂದ ಸಾಮೂಹಿಕ ವಿತರಣಾ ವ್ಯವಸ್ಥೆಯಿರಿಸಿಕೊಳ್ಳುವುದು ಉತ್ತಮ ಹಲವಾರು ಕಡೆ ಇಂತಹ ವ್ಯವಸ್ಥೆಗಳನ್ನು ಮಾಡಿ 'ಝಕಾತ್'ನ ಸಮರ್ಪಕ ವಿತರಣಾ ವ್ಯವಸ್ಥೆಗೆ ಏರ್ಪಾಡು

ಮಾಡಲಾಗಿದೆ. ಇದೀಗ ಗಂಡಸರು, ಮಹಿಳೆಯರು ಮತ್ತು ಮಕ್ಕಳು ಮನೆ ಮನೆಗೆ ರಝಕಾತ್ ಕೇಳಲು ಬರುವ ಕಾರಣ ಹೆಚ್ಚಿನ ಮನೆಯವರು ಒಂದು ಅಥವಾ ಎರಡು ರೂಪಾಯಿ ಕೊಟ್ಟು ಕಳುಹಿಸುವ ಅಭ್ಯಾಸ ಮಾಡಲಾಗಿದೆ. ಆದರೆ ಇದು 'ರಝಕಾತ್' ಆಗುವುದಿಲ್ಲ. ಶ್ರೀಮಂತರು ಬಡ ಬಗ್ಗರನ್ನು ಗುರುತಿಸಿ, ಅವರ ಮನೆಗೆ ಹೋಗಿ ಅಕ್ಕಿ, ತೆಂಗಿನಕಾಯಿ, ಹಣ್ಣು, ಬಟ್ಟೆಗಳ ವಿತರಣೆ ಮಾಡಿದರೆ 'ರಝಕಾತ್' ಎಂಬುದಕ್ಕೆ ಅರ್ಥವನ್ನೀಡಬಹುದಾಗಿದೆ. ಈದ್ ಬ್ಯಾರಿಗಳಿಗೆ ಮಾತ್ರವಲ್ಲದೆ ಇಡೀ ಮುಸ್ಲಿಂ ಜನಾಂಗದ ಮಹಾ ಹಬ್ಬ, ನಿಜವಾದ ಅರ್ಥದಲ್ಲಿ ಮೈಮನಗಳಲ್ಲಿ ಸ್ಫೂರ್ತಿ ಉಕ್ಕೇರಿಸುವ ಹಬ್ಬ. ಈ ಪೆರ್ನಾಲ್ ವಿಶ್ವ ಮುಸ್ಲಿಮರು ಏಕ ಪ್ರಕಾರವಾಗಿ ಅನುಭವಿಸುವ ಈದ್ ವೈಶಿಷ್ಟ್ಯ ಪೂರ್ಣ ಪರ್ವ ದಿನವಾಗಿದೆ. ಆದರೆ ವಿಶ್ವದೆಲ್ಲೆಡೆ ಏಕದಿನವೇ ಈದ್ ಘೋಷಣೆಯಾಗುವುದಿಲ್ಲ. ಕೆಲವೊಮ್ಮೆ ಒಂದೇ ಪ್ರದೇಶಗಳಲ್ಲಿ ಬೇರೆ ಬೇರೆ ದಿನಗಳಲ್ಲಿ ಈದ್ ಆಚರಿಸುವುದು ಇದೆ. ಇದಕ್ಕೆ ಕಾರಣ ಚಂದ್ರ ದರ್ಶನದಲ್ಲಾಗುವ ವ್ಯತ್ಯಾಸ ಅನಿಶ್ಚಿತತೆಯೇ ಈದುಲ್ ಫಿತ್ರ್‌ನ ವೈಶಿಷ್ಟ್ಯ. ಈದಲ್ ಫಿತ್ರ್, ಪ್ರೇಮ ಭ್ರಾತೃತ್ವ ಮತ್ತು ಸಮಾನತೆಯ ಪ್ರತೀಕವಾಗಿ ಆಚರಿಸಲ್ಪಡುತ್ತದೆ. ಇಷ್ಟೇ ಅಲ್ಲದೆ ಹಲವಾರು ಹಬ್ಬಗಳನ್ನು ಬ್ಯಾರಿ ಸಮುದಾಯದವರು ಆಚರಿಸುತ್ತಾರೆ. ಆನಂದ, ವಿನೋದ, ಮನೋರಂಜನೆಯ ಅನುಭೂತಿ ಮಾನವನ ಪ್ರಾಕೃತಿಕ ಬೇಡಿಕೆಗಳು. ಆದ್ದರಿಂದ ಹಬ್ಬದ ದಿನಗಳಲ್ಲಿ ಅದಕ್ಕೆ ವಿಶೇಷ ಮಹತ್ವ ನೀಡಿದೆ. ಹಬ್ಬವನ್ನು ಪ್ರೇಮ, ಸಹೋದರ್ಯತೆಯ ಮಹಾ ಗುಣಗಳೊಂದಿಗೆ ಅನುಭವಿಸಬೇಕು. ಆದರೆ ಇತ್ತೀಚಿನ ದಿನಗಳಲ್ಲಿ ಮೇಲೆ ತಿಳಿಸಲಾದಂತ ಹಬ್ಬಗಳ ಆಚರಣೆಯಲ್ಲಿ ಆನಂದ, ವಿನೋದಗಳು ಮಾಯವಾಗಿದೆ. ಹಬ್ಬಗಳು ಬಂತೆಂದರೆ, ನಗರದ ಎಲ್ಲಾ ಕಡೆ ಪೋಲಿಸ್ ತುಕಡಿಗಳನ್ನು ನೇಮಿಸುವುದನ್ನು ಕಾಣಬಹುದು. ಹಬ್ಬಕ್ಕೆ ಸಂಬಂಧಿಸಿದ ಮೆರವಣಿಗೆಗಳ ಸಮಯದಲ್ಲಿ ಸಂಭವಿಸುವ ಗಲಾಟೆಗಳು ಗಮನಾರ್ಹ. ಹಬ್ಬದ ದಿನದಂದು ಕಂಡುಬರುತ್ತಿದ್ದ ಪ್ರೇಮ, ಸಹೋದರ್ಯತೆ ಈಗ ಕಾಣದಾಗಿದೆ. ಬ್ಯಾರಿಗಳು ಮದುವೆಯನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ. ಈಗ ಮದುವೆ ಎಂಬುದು ಒಂದು ದಿನ ಅಥವಾ ಒಂದು ಗಂಟೆಯಲ್ಲಿ ಮುಗಿದರೆ, ಹಿಂದೆ ಅದು ಎರಡು

ವಾರಗಳ ಕಾಲ ನಡೆಯುತ್ತಿತ್ತು ಎಂದು ಹಿರಿಯರು ಜ್ಞಾಪಿಸುತ್ತಾರೆ. ಈಗ ನಡೆಯುತ್ತಿರುವ ಮದುವೆಯಲ್ಲಿ ಹಿಂದಿನ ಛಾಯೆಯೇ ಕಂಡು ಬರುವುದಿಲ್ಲ. ತಾಲ, ಬಳೆಬೆಯಿಕ್‌ರೆರ್, ಬಳೆ ಬೆಚ್ಚಿಕುಟಪೋಂಡೆ ಇತ್ಯಾದಿ ಮಾಯವಾಗುತ್ತಿದೆ. ಹಿಂದೆ ೧೫ರಂದು ವಿಶೇಷ ಔತಣ ಕೂಟ ನಡೆಯುತ್ತಿದ್ದು ಅದಕ್ಕೆ ' ಪವುನಂಜಿರೋ ತಾಲ' ಎಂದು ಕರೆಯಲಾಗುತ್ತಿತ್ತು. ಒಂದು ದಿನ ಎಣ್ಣೆ ಹಾಕಿ ಸ್ನಾನ, ಮದುಮಗಳಿಗೆ ಬಳೆ ಇಡುವುದು, ಮದುಮಗಳ ದೇಹವನ್ನು ಬೆಳ್ಳಗೆಗೊಳಿಸುವುದು, ಮದುಮಗಳ ಮಾವನಿಗೆ, ಅತ್ತೆಗೆ, ಭಾವನಿಗೆ ಹೀಗೆ ಹಲವಾರು ಔತಣದೊಂದಿಗೆ ಮದುವೆ ನಿರಂತರ ಹದಿನೈದು ದಿನಗಳ ಕಾಲ ನಡೆಯುತ್ತಿತ್ತು. ಮದುಮಗಳನ್ನು ಆರಾಮದ ಕುರ್ಚಿಯಲ್ಲಿ ಕೂರಿಸಿ ಅವಳ ಸುತ್ತಲೂ ಹೆಂಗಸರು, ಮಕ್ಕಳು, ವಿಧವೆಯರು ಸೇರಿ ಚಪ್ಪಾಳೆ ತಟ್ಟುತ್ತಾ ಹಾಡಿ ಮದುಮಗಳಿಗೆ ಖುಷಿ ಕೊಡುವುದು ಇದರ ವೈಶಿಷ್ಟ್ಯವಾಗಿತ್ತು. ಇದಕ್ಕೆ 'ಕೈಕೊಟ್ಟು ಪಾಟ್' ಎಂದು ಕರೆಯುತ್ತಿದ್ದರು. ಮದುವೆಯ ದಿನ ವಿಶೇಷ ಗೌಜಿ ಗದ್ದಲವಿರುತ್ತದೆ. ಈಗ ಮದುವೆಯು ಹಾಲ್‌ಗಳಲ್ಲಿ ನಡೆಯುತ್ತಿರುವ ಕಾರಣ ಮನೆಯಲ್ಲಿ ಹಿಂದಿನಂತೆ ವಿಶೇಷ ಗೌಜಿ ಗದ್ದಲವಿಲ್ಲ. ಈಗ ಇಸ್ಲಾಮೀ ಸಂಘಟನೆ ಮತ್ತು ಉಲಮಾಗಳು, ವರದಕ್ಷಿಣೆ ರಹಿತ ವಿವಾಹಕ್ಕೆ ಪ್ರೋತ್ಸಾಹ ನೀಡುತ್ತಿದ್ದಾರೆ. ಮಂಗಳೂರಿನ ಹಯಾತುಲ್ ಇಸ್ಲಾಮ್ ಅಸೋಸಿಯೇಶನ್ ಪ್ರತೀ ತಿಂಗಳು ಮದುವೆಗೆ ಸಹಾಯ ಧನ ನೀಡುತ್ತದೆ. ಅಲ್ಲದೆ ಸರಳ ವಿವಾಹವನ್ನು ನಡೆಸುತ್ತದೆ. ಇತರ ಸಮಾರಂಭಗಳಾದ ಅಪ್ಪತ್ತೆ ಮಂಞಳ, ಪೇರ್ ಬೆಯ್‌ಕೆರೆ, ಕಜಂಬು, ನಾಪೊರೆಕುಲಿ, ಕಾವ್‌ಕುತ್ತುರೆ, ಸುನ್ನತ್ ಮಂಞಳ ಮುಂತಾದವುಗಳ ಆಚರಣೆ ಕಡಿಮೆಯಾಗುತ್ತಾ ಬಂದಿದೆ. ಏಕೆಂದರೆ ಉತ್ಪತ್ತಿ ಕಡಿಮೆ. ಸಮಯದ ಕೊರತೆ, ಜೀವನ ಯಂತ್ರದ ತರಹ ಆದ ಕಾರಣ ಈ ರೀತಿಯ ಬದಲಾವಣೆಯಾಗಿದೆ. ಈ ರೀತಿ ಬ್ಯಾರಿಗಳ ಸಂಸ್ಕೃತಿಯ ನಾಶವಾಗುತ್ತಿದೆ. ಬ್ಯಾರಿ ಸಮುದಾಯವು ಹುತಾತ್ಮರಾದ ಪವಾಡ ಪುರುಷರನ್ನು ನಂಬುವ ಕ್ರಮವೂ ಉರೂಸ್ ಆಚರಣೆಯಲ್ಲಿ ಕಾಣಬಹುದು. ವಿದ್ಯಾವಂತರಾದ ಬ್ಯಾರಿಗಳು ಇದರಲ್ಲಿ ನಂಬಿಕೆ ಇಟ್ಟಿಲ್ಲ. ದರ್ಗಾ ಒಂದು ಪವಿತ್ರವಾದ ಸ್ಥಾನ. ಇಲ್ಲಿಗೆ ಹಲವಾರು ಜನರು ದೇಶದ ಮೂಲೆ

ಮೂಲೆಗಳಿಂದ ಬರುತ್ತಾರೆ. ದರ್ಗಾಗಳಲ್ಲಿ 'ಉರೂಸ್' ಹಬ್ಬವನ್ನು ಜನರು ಜಾತಿ ಮತ ಭೇದವಿಲ್ಲದೆ ವಿಜೃಂಭಣೆಯಿಂದ ಆಚರಿಸುತ್ತಾರೆ. ಪ್ರಾರ್ಥನೆಯನ್ನು ಸಲ್ಲಿಸಿ ಹರಕೆಯ ರೂಪದಲ್ಲಿ ದರ್ಗಾಕ್ಕೆ ಕಾಣಿಕೆ ನೀಡುತ್ತಾರೆ. ಉರೂಸ್ ಬೇರೆ ಬೇರೆ ಪ್ರದೇಶದಲ್ಲಿ ಬೇರೆ ಬೇರೆ ರೀತಿಯಲ್ಲಿ ಆಚರಿಸುತ್ತಾರೆ. ಇತ್ತೀಚೆಗೆ ಉರೂಸ್ ಆಚರಣೆಯಲ್ಲಿ ವಿಭಿನ್ನ ಅಭಿಮತಗಳನ್ನು ಕಾಣಬಹುದು. ಜಮಾತುಲ್ ಇಸ್ಲಾಂನವರ ಪ್ರಕಾರ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಲು ಅಲ್ಲಾಹುವಿಗೆ ಮಧ್ಯವರ್ತಿಗಳ ಅಗತ್ಯವಿಲ್ಲ. ನಮ್ಮ ಬೇಡಿಕೆಗಳನ್ನು ನೇರವಾಗಿ ಅಲ್ಲಾಹುವಿನಲ್ಲಿ ಹೇಳಿಕೊಂಡಾಗ ತಮ್ಮ ಇಷ್ಟಾರ್ಥಗಳು ನೆರವೇರುತ್ತದೆ. ಮೌಲೂದ್ ಎಂಬುವುದು ಪ್ರವಾದಿ ಪ್ರೇಮದ ಮಾಧುರ್ಯ ತುಂಬುತ್ತದೆ ಎಂಬುದು ಬ್ಯಾರಿಗಳ ನಂಬಿಕೆ. ಆದರೆ ಈ ಆಚರಣೆಯಲ್ಲೂ ಶ್ರೀಮಂತರ ಆಡಂಬರವನ್ನು ಕಾಣಬಹುದು. ದುಆ, ಕುರಾನ್ ಪಠಣ ದಿನನಿತ್ಯ ಮನೆಯಲ್ಲಿ ಮಾಡಬಹುದು. ಎಲ್ಲರನ್ನೂ ಮನೆಗೆ ಕರೆದು ಹಝ್ರತ್‌ರವರ ಮುಖಾಂತರ ದುಃವಾ ಮಾಡಿ ಊಟ ಮಾಡುವ ಪರಿ ಪಾಠವು ಈ ಮೌಲೂದ್ ಆಚರಣೆಯಲ್ಲಿ ಕಂಡು ಬರುತ್ತದೆ. ಇತ್ತೀಚೆಗೆ ಮೌಲೂದ್‌ಗೆ ಕರೆದಾಗ, ದುಆ ಮಾಡುವ ಸಮಯಕ್ಕೆ ಬರದೆ, ಊಟದ ಹೊತ್ತಿಗೆ ಬಂದು ಊಟ ಮಾಡಿ ಜಾಗ ಖಾಲಿ ಮಾಡುತ್ತಾರೆ. ಈ ರೀತಿಯ ಮೌಲೂದ್ ಆಚರಣೆಯ ಅಗತ್ಯವಿದೆಯೋ ಎಂಬ ಯೋಚನೆ ಬರುತ್ತದೆ. ಹಿಂದಿನ ಕಾಲದಲ್ಲಿ ಮೂಡ ನಂಬಿಕೆಗಳ ಬಗ್ಗೆ ಆಳವಾದ ವಿಶ್ವಾಸ ವನ್ನು ಬ್ಯಾರಿಗಳು ಇಡುತ್ತಿದ್ದರು. ಇತ್ತೀಚೆಗೆ ಮೂಡ ನಂಬಿಕೆಗಳಲ್ಲಿರುವ ನಂಬಿಕೆಗಳು ಕಡಿಮೆಯಾಗುತ್ತಿವೆ. ಒಂದನೆಯದಾಗಿ ಇಸ್ಲಾಂ ಧರ್ಮದಲ್ಲಿ ಮೂಢನಂಬಿಕೆಗಳಿಗೆ ಸ್ಥಾನವಿಲ್ಲ. ಬ್ಯಾರಿಗಳು ವಿದ್ಯಾವಂತರಾದ ಹಾಗೆ ಮೂಢ ನಂಬಿಕೆಗಳ ಮೇಲಿನ ಒಲವು ಕಡಿಮೆಯಾಗುತ್ತಿದೆ. ಇನ್ನು ಕೆಲವು ವರ್ಷಗಳ ನಂತರ ಮೂಢ ನಂಬಿಕೆಗಳು ಅಂದರೆ ಏನು ಎಂದು ಬ್ಯಾರಿಗಳು ಯೋಚಿಸುವ ಕಾಲ ಉಂಟಾಗಬಹುದು.

ಹಿಂದೆ ಬ್ಯಾರಿ ಸಮುದಾಯದ ಸಾಮಾಜಿಕ ಜೀವನದಲ್ಲಿ ಸಮಾನತೆ, ಪ್ರೀತಿ, ವಾತ್ಸಲ್ಯಗಳು ಹೆಚ್ಚಾಗಿತ್ತು. ಇದಕ್ಕೆ ಕಾರಣ ಅವಿಭಜಿತ ಕುಟುಂಬ, ಬ್ಯಾರಿಗಳು ಒಂದೇ ಮನೆಯಲ್ಲಿ ಒಟ್ಟಾಗಿ ಜೀವನ ನಡೆಸುತ್ತಿದ್ದರು. ಒಂದು ಕುಟುಂಬದ ಎಲ್ಲಾ ಮಕ್ಕಳು ತಂದೆಯ

ಮಾತಿನಂತೆ ನಡೆದುಕೊಂಡು ಅವರ ಜೊತೆಯಾಗಿ ಇರುತ್ತಿದ್ದರು. ಆದರೆ ಈಗ ಆ ರೀತಿಯ ಕುಟುಂಬ ಕಾಣದಾಗಿದೆ. ಸಾಮಾಜಿಕ ಜೀವನದಲ್ಲಿ ಆಚರಿಸುವ ಹಬ್ಬಗಳಲ್ಲೂ ವ್ಯತ್ಯಾಸ ಕಾಣಬಹುದು. ಹಿಂದೆ ರಂಜಾನ್ ತಿಂಗಳಲ್ಲಿ ಕೊಡುವ ಝಕಾತಿಗೆ ಅರ್ಥವಿತ್ತು. ಈಗ ಅದು ಇಲ್ಲದಾಗಿದೆ. ಬಡವರು ಒಂದು ತಿಂಗಳ ಉಪವಾಸದ ದಿನದಂದು ಮನೆ ಮನೆಗೆ ಹೋಗಿ ಹಸ್ತ ತೋರಿಸುವುದು ಮತ್ತು ಶ್ರೀಮಂತರ ಮನೆಯ ಮುಂದೆ ಸಾಲು ನಿಂತು ಅವರು ಕೊಡುವ ಐದು ರೂಪಾಯಿಗೆ ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ಬಿಸಿಲಿನ ಬೇಗೆಗೆ ದಣಿದು ಹಣ ಪಡೆದು ಹಿಂತಿರುಗುವರು. ಈ ರೀತಿಯ ಝಕಾತ್‌ಗೆ ಅರ್ಥವಿಲ್ಲ ಝಕಾತ್ ಕೊಟ್ಟರೆ ಅದು ಒಬ್ಬನ ಜೀವನವನ್ನು ಆದಷ್ಟು ಬದಲಾಯಿಸುವಂತಿರಬೇಕು. ವರ್ಗಸಂಘರ್ಷ ಮತ್ತು ಜಾತಿ ಪದ್ಧತಿ ಬ್ಯಾರಿ ಸಮುದಾಯದಲ್ಲಿಲ್ಲ. ಇವರ ಸಾಮಾಜಿಕ ಕಲ್ಪನೆಯು ಉನ್ನತವಾಗಿದೆ. ಅದರಲ್ಲಿ ಮಾನವೀಯ ದಯೆ, ಕರುಣೆ ಮತ್ತು ಪ್ರೀತಿಯು ಅಗ್ರ ಪಂಕ್ತಿಯಲ್ಲಿದೆ. ಆದರೆ ಝಕಾತ್ ಕೊಡುವುದನ್ನು ನೋಡಿದರೆ ಸಮಾಜದಲ್ಲಿರುವ ಮೇಲಿನ ಅಂಶಗಳೆಲ್ಲ ಮಾಯವಾಗಿದೆಯೋ ಎಂದು ಅನಿಸುತ್ತದೆ. ಬಕ್ರೀದ್ ಹಬ್ಬದ ಸಮಯದಲ್ಲಿ ಕೊಡುವ 'ಕುರ್ಬಾನಿ'ಯು ಅರ್ಥಯುತವಾಗಿದೆ. ಆದರೆ ಇತ್ತೀಚೆಗೆ ಆ ಅರ್ಥವನ್ನೇ ತಲೆ ಕೆಳಗು ಮಾಡಲಾಗಿದೆ 'ಕುರ್ಬಾನಿ' ಬಡವರಿಗೆ ಕೊಡುವ ಬದಲು ಅವರ ಸಂಬಂಧಿಕರಿಗೆ ಹಂಚಲಾಗುತ್ತದೆ. ಇದು ಈಗಿನ ಕುರ್ಬಾನಿ ಮತ್ತು ಸಾಮಾಜಿಕ ಆಚರಣೆಯಲ್ಲೂ ಹಲವಾರು ಮಾರ್ಪಾಡುಗಳಾಗಿವೆ, ಹಿಂದೆ ಮಾಡುತ್ತಿದ್ದ ಆಚರಣೆಗಳನ್ನೆಲ್ಲಾ ಹೆಸರಿಗೆ ಮಾತ್ರ ಮಾಡಲಾಗುತ್ತಿದೆ ಕೆಲವು ಸಾರಿ ಮಾಡದೇ ಇರುವವರೂ ಇದ್ದಾರೆ. ಮದುವೆ ಇತರ ಸಮಾರಂಭಗಳಲ್ಲೂ, ಆಚಾರ, ಉಡುಗೆ, ತೊಡುಗೆಗಳಲ್ಲೂ ಬದಲಾವಣೆಗಳು ಕಾಣಬಹುದು. ಆದರೆ ಈ ಎಲ್ಲಾ ಮಾರ್ಪಾಟಿನಿಂದಾಗಿ ಸಮಾಜದಲ್ಲಿ ಇರುವಂಥ ಬ್ಯಾರಿ ಸಮುದಾಯವು ವಿಭಾಗವಾಗಿ ಅವರೊಳಗೆ ಸಹೋದರತೆ, ಪ್ರೀತಿ, ವಾತ್ಸಲ್ಯ ಕಾಣದಾಗಿದೆ. ಆದುದರಿಂದ ಸಮಾಜದಲ್ಲಿ ಬ್ಯಾರಿಗಳ ಒಡನಾಟ ಇತರ ಸಮುದಾಯದವರೊಡನೆಯೂ ಕಡಿಮೆಯಾಗುತ್ತಾ ಬಂದಿದೆ. ಬ್ಯಾರಿಗಳು ವ್ಯಾಪಾರಸ್ಥರಾದ ಕಾರಣ ತುಳುನಾಡಿನ ಜನರು ಇವರನ್ನು 'ಬ್ಯಾರಿಗಳು' ಎಂದು ಕರೆದರು ಎಂಬ ಹೇಳಿಕೆಯಿದೆ.

ಬ್ಯಾರ ಮಾಡುವವರೇ ಬ್ಯಾರಿಗಳು ಎನ್ನುವುದು ತಪ್ಪು ಯಾಕೆಂದರೆ ಶೆಟ್ಟಿಗಳು ಮತ್ತು ಕೊಂಕಣಿಗಳು ವ್ಯಾಪಾರಸ್ಥರೆ, ಆದರೆ ಅವರನ್ನು 'ಬ್ಯಾರಿ'ಗಳೆಂದು ಕರೆಯಲಿಲ್ಲ. ಈಗಿನ ಸಮಯದಲ್ಲಿ ಬ್ಯಾರಿಗಳು ವಿದ್ಯಾವಂತರಾಗಿದ್ದಾರೆ. ಇತರ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಆದುದರಿಂದ ಈಗಿನ ಕಾಲದಲ್ಲೂ ಬ್ಯಾರಿಗಳು ವ್ಯಾಪಾರಸ್ಥರು ಎನ್ನುವ ಪದ ಅದಕ್ಕೆ ಅನ್ವಯಿಸುವುದಿಲ್ಲ. ಈಗ ಬ್ಯಾರಿಗಳು ತಮ್ಮದೇ ಆದ ಶಿಕ್ಷಣ ಸಂಸ್ಥೆ, ಆಸ್ಪತ್ರೆಗಳು, ಸಂಘ ಸಂಸ್ಥೆಗಳನ್ನು ನಡೆಸುವ ಕಾರಣ, ಅವರು ಎಲ್ಲಾ ಕ್ಷೇತ್ರದಲ್ಲೂ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದಾರೆ. ಸಾಮಾಜಿಕವಾಗಿ ಮುಂದುವರಿಯುತ್ತಿದ್ದಾರೆ. ಆದರೆ ಬ್ಯಾರಿ ಸಮುದಾಯ ಗಲ್ಫ್ ರಾಷ್ಟ್ರದ ಕಡೆ ಹೆಚ್ಚಿನ ಒಲವು ತೋರಿಸುತ್ತಿದ್ದಾರೆ. ಅಲ್ಲಿ ಸಿಗುವ ಉದ್ಯೋಗ ಮತ್ತು ಹೆಚ್ಚಿನ ಸಂಬಳ ಅವರನ್ನು ಆಕರ್ಷಿಸಿದೆ. ಈಗ ಪ್ರತಿಯೊಂದು ಮನೆಯ ಸದಸ್ಯ ಗಲ್ಫ್ ರಾಷ್ಟ್ರದಲ್ಲಿದ್ದಾರೆ ಇದರಿಂದ ಆರ್ಥಿಕವಾಗಿ ಬ್ಯಾರಿ ಕುಟುಂಬ ಉನ್ನತಿಯ ಕಡೆ ಹೋದರೂ, ಹಲವಾರು ಸಮಸ್ಯೆಗಳನ್ನೂ ಎದುರಿಸುತ್ತಿದೆ. ಬ್ಯಾರಿ ಯುವಕರು ಶಿಕ್ಷಣ ಮೊಟಕುಗೊಳಿಸಿ ಗಲ್ಫ್‌ರಾಷ್ಟ್ರಕ್ಕೆ ಹೋಗುವ ಕಾರಣ, ಶಿಕ್ಷಿತರಾದ ಬ್ಯಾರಿ ಯುವತಿಯರಿಗೆ ವಿವಾಹ ಯೋಗ್ಯ ಯುವಕರ ಅಭಾವವುಂಟಾಗಿದೆ. ಅಷ್ಟೇ ಅಲ್ಲದೇ ಕುಟುಂಬದಲ್ಲಿ ಆಗುವ ಸಮಾರಂಭಗಳಲ್ಲಿ, ಆಗು ಹೋಗುಗಳಲ್ಲಿ ಭಾಗವಹಿಸಲು ಸಾಧ್ಯವಾಗುವುದಿಲ್ಲ. ಹೆಚ್ಚಿನ ಸಂಪಾದನೆಗೋಸ್ಕರ ತನ್ನ ಸಾಂಸಾರಿಕ ಜೀವನವನ್ನೇ ಕಡೆಗಣಿಸಿದಂತಾಗಿದೆ. ಹಿಂದೆ ಬ್ಯಾರಿಗಳ ಜೀವನ ನೀತಿಯಿಂದ ಕೂಡಿತ್ತು. ಈಗ ನೈತಿಕತೆಯೇ ಮಾಯವಾಗಿದೆ. ಸಂಪತ್ತಿನ ಕೊರತೆಯಿಲ್ಲದ ಕಾರಣ, ಬೇಕಾದಷ್ಟು ಹಣ ವ್ಯಯ ಮಾಡಿ ತಮ್ಮ ಜೀವನದ ಶೈಲಿಯನ್ನೇ ಬದಲಾಯಿಸಿಕೊಂಡಿದ್ದಾರೆ. ಬ್ಯಾರಿ ಮಹಿಳೆಯರು ಸಮಾಜದಲ್ಲಿ ತಮ್ಮನ್ನು ಗುರುತಿಸುವ ಅಗತ್ಯವಿದೆ. ಇದಕ್ಕೆ ಪುರುಷರು ಸಹಕರಿಸಬೇಕಾಗಿದೆ. ಅಂದರೆ ಮಹಿಳೆಯರು ಸಮಾಜದಲ್ಲಿ ಸ್ವತಂತ್ರವಾಗಿ ಬೆರೆಯುವಂತೆ, ಸಾಧನೆ ಮಾಡುವಂತೆ ಅವರ ಮನೆಯ ಪುರುಷರು ಸದಾ ಸಹಾಯ ಹಸ್ತವನ್ನು ನೀಡಬೇಕು.

ಒಂದು ಕುಟುಂಬದ ಮಹಿಳೆಯೊಬ್ಬಳು ಕಲಿತರೆ ಇಡೀ ಕುಟುಂಬ ಶಿಕ್ಷಣ ಪಡೆದಂತೆ ಎಂಬುದು ಅಕ್ಷರಶ ನಿಜ ಯಾಕೆಂದರೆ ಗಂಡು ಮಕ್ಕಳು ಶಿಕ್ಷಣ ಪಡೆದರೆ ಸಮಾಜಕ್ಕೆ ಒಳಿತು, ಕುಟುಂಬಕ್ಕಲ್ಲ ಅದೇ ಹೆಣ್ಣು ಹುಡುಗಿ ವಿದ್ಯಾಭ್ಯಾಸ ಮಾಡಿದರೆ ಇಡೀ ಕುಟುಂಬಕ್ಕೆ ಒಳಿತು. ಬ್ಯಾರಿ ಕುಟುಂಬ ಗಲ್ಫ್ ರಾಷ್ಟ್ರಕ್ಕೆ ಒಲವು ತೋರಿಸುವ ಕಾರಣ ಪಿತೃ ಮೂಲ ಕುಟುಂಬ ಮಾತೃ ಮೂಲ ಕುಟುಂಬವಾಗಿ ಮಾರ್ಪಾಡಾಗಿದೆ. ಹೆಣ್ಣು ತನ್ನ ಸ್ವಾತಂತ್ರವನ್ನು ಬಯಸಿದರೆ ಬ್ಯಾರಿ ಕುಟುಂಬದಲ್ಲಿ ಪಡೆಯುವಂತಿಲ್ಲ. ಆದರೆ ಗಂಡು ಮಕ್ಕಳಿಗೆ ಹೆಚ್ಚಿನ ಸ್ವಾತಂತ್ರ್ಯ ಸಿಕ್ಕಿದ ಕಾರಣ ಅವನು ದಾರಿ ತಪ್ಪುತ್ತಾನೆ. ಬ್ಯಾರಿ ಹುಡುಗಿಯರು, ಉನ್ನತ ವಿದ್ಯಾಭ್ಯಾಸ ಪಡೆಯಬೇಕೆಂದು ಇಚ್ಚಿಸಿದರೂ ಅದು ಕನಸಾಗಿ ಉಳಿಯುತ್ತದೆ. ಅವರಿಗೆ ಬೇಕಾದುದನ್ನು ಪಡೆಯುವ ಹಕ್ಕು ಕೂಡ ಈಗಲೂ ಇಲ್ಲ. ಇದಕ್ಕೆ ಬ್ಯಾರಿ ಗಂಡಸರೇ ಕಾರಣ. ಯಾವ ಬ್ಯಾರಿ ಹುಡುಗರು ತನ್ನ ಹೆಂಡತಿ ವಿದ್ಯಾವಂತಳಾಗಿರಬೇಕು, ಉದ್ಯೋಗಿಯಾಗಿರಬೇಕು ಎಂದು ಆಶಿಸದೆ ಮದುವೆಯಾದ ಮೇಲೆ ಅವಳು ತನ್ನ ಮಕ್ಕಳು, ತಂದೆ ತಾಯಿ, ಮನೆ ನೋಡುವವಳಾಗಿರಬೇಕೆಂದು ಇಚ್ಚಿಸುವವರು. ಬ್ಯಾರಿ ಹುಡುಗಿಯರು ಹೊರಗಡೆ ಹೋಗಬೇಕಾದರೆ ಅವರೊಡನೆ ಕುಟುಂಬದ ಒಬ್ಬ ಸದಸ್ಯನನ್ನು ಅಂಗರಕ್ಷಕನಾಗಿ ಕಳುಹಿಸುತ್ತಾರೆ. ಹಿಂದಿನ ಕಾಲದಿಂದ ಹಿಡಿದು ಈಗಿನ ಕಾಲದವರೆಗೂ ಬ್ಯಾರಿ ಕುಟುಂಬದಲ್ಲಿ ಹೆಣ್ಣಿನ ಸ್ಥಾನ ಮಾನ ಬದಲಾಗಲಿಲ್ಲ. ಬ್ಯಾರಿ ಹುಡುಗಿಯರ ಸ್ಥಾನಮಾನ ಬದಲಾದರೆ ಮಾತ್ರ ಪ್ರತಿಯೊಂದು ಬ್ಯಾರಿ ಕುಟುಂಬ ಬೆಳಗಬಹುದು. ಈ ಬದಲಾವಣೆಯನ್ನು ತರಬೇಕಾದವರು ಬ್ಯಾರಿ ಯುವಕರು. ಬ್ಯಾರಿ ಕುಟುಂಬದ ಒಂದು ವೈಶಿಷ್ಟ್ಯತೆಯೆಂದರೆ ಕುಟುಂಬದ ಐಕ್ಯತೆ. ಈ ಐಕ್ಯತೆ ಮುಂದಿನ ದಿನಗಳಲ್ಲಿ ಉಳಿದು ಬೆಳೆಯಬೇಕಾದರೆ ಕುಟುಂಬದ ಎಲ್ಲರನ್ನು ಸಮಾನತೆಯಿಂದ ಕಾಣುವ ಅವಶ್ಯಕತೆಯಿದೆ. ಅದರೊಂದಿಗೆ ಬ್ಯಾರಿ ಸಮುದಾಯದ ವಿಶಿಷ್ಟ ಸಾಂಪ್ರದಾಯಿಕ ಆಚರಣೆ, ರೀತಿ ನಿಯಮಗಳು ಕುಟುಂಬ ವ್ಯವಸ್ಥೆ ಪೂರ್ತಿಯಾಗಿ ನಶಿಸಿಹೋಗದೆ, ಆಧುನಿಕತೆಯ ಲೇಪದೊಂದಿಗಾದರೂ ಮುಂದಿನ ಪೀಳಿಗೆಗೆ ಉಳಿಸಿಡುವ ಅವಶ್ಯಕತೆಯಿದೆ.

# ಪರಾಮರ್ಶನ ಗ್ರಂಥಗಳು / ಲೇಖನಗಳು

೧. ಅಬೂರೈಹಾನ್ ನೂರಿ, ೧೯೯೦
ಮೈಕಾಲ, ಬ್ಯಾರಿ ಪ್ರಕಾಶನ, ಬೆಂಗಳೂರು

೨. ಇಚ್ಲಂಗೋಡು ಬಿ.ಎಂ, ೧೯೯೭
ತುಳುನಾಡು ಮುಸ್ಲಿಮರು, ಬ್ಯಾರಿ ಪ್ರಕಾಶನ, ಬೆಂಗಳೂರು

೩. ಇಚ್ಲಂಗೋಡು ಬಿ.ಎಂ, ೨೦೦೦
ಪೊಲಿ, ಪ್ರಕಾಶ್ ಆಫ್‌ಸೆಟ್ ಪ್ರಿಂಟರ್ಸ್, ಮಂಗಳೂರು

೪. ಇಬ್ರಾಹಿಂ ಸಈದ್, ೨೦೦೦
ಮುಸುಕಿನಲ್ಲಿ ಮುಸ್ಲಿಂ ಮಹಿಳೆ, ಶಾಂತಿ ಪ್ರಕಾಶನ, ಮಂಗಳೂರು

೫. ಡಾ. ವಹಾಬ್ ದೊಡ್ಡಮನೆ, ೨೦೦೮
ತುಳುನಾಡಿನ ಮುಸ್ಲಿಮರು, ಗ್ರೀಡ್‌ವರ್ಡ್ಸ್ ಪಬ್ಲಿಕೇಶನ್, ಮಂಗಳೂರು

೬. ಡಾ. ವಿವೇಕ ರೈ. ಬಿ.ಎ. (ಸಂ) ೨೦೦೭
ತುಳುಸಾಹಿತ್ಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಡಾ. ಪೌಝಿಯಾ ಸುಲ್ತಾನ, ೨೦೦೦
ಮುಸ್ಲಿಮರ ಹಬ್ಬಗಳು, ಶಾಂತಿ ಪ್ರಕಾಶನ, ಮಂಗಳೂರು

೮. ಡಾ. ಕಲಬುರ್ಗಿ ಎಂ.ಎಂ
ಕರ್ನಾಟಕ ಕೈಪಿಯತ್ತುಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ

೯. ಮುನ್ನಿ ಪ್ರೇಮ್‌ಚಂದ್, ೨೦೦೪
ಇಸ್ಲಾಮೀ ಸಂಸ್ಕೃತಿ, ಶಾಂತಿ ಪ್ರಕಾಶನ, ಮಂಗಳೂರು

೧೦. ಸಾಲೆತ್ತೂರು ಬಿ.ಎ. ೧೯೩೬
ಪ್ರಾಚೀನ ಕರ್ನಾಟಕ, ಪೂನ

೧೧. ಡಾ. ಸುಶೀಲಾ ಉಪಾಧ್ಯಾಯ, ೧೯೯೭
ಬ್ಯಾರಿ ಭಾಷೆ ಮತ್ತು ಜನಪದ ಕಥೆಗಳು, ಬ್ಯಾರಿ ಪ್ರಕಾಶನ ಬೆಂಗಳೂರು

**೧೨. ಹಂಝುಮಲಾರ್, ೧೯೯೭**
ಮ್ಯೊಲಾಂಜಿ, ಬ್ಯಾರಿ ಪ್ರಕಾಶನ, ಬೆಂಗಳೂರು

**೧೩. ಹಂಝುಮಲಾರ್, ೨೦೦೧**
ಬ್ಯಾರಿ ಮುಸ್ಲಿಮರು, ಮಧುರ ಪ್ರಕಾಶನ, ಮಂಗಳೂರು

**೧೪. ಹಂಝುಮಲಾರ್, ೨೦೦೪**
ಬ್ಯಾರಿ ಭಾಷೆಯ ಉಗಮ ಮತ್ತು ವೈವಿಧ್ಯತೆ

**೧೫. ಹನೀಫ್ ಬಿ.ಎ., ೧೯೮೯**
ಮುಸ್ಲಿಂ ಇಂಡಿಯಾ, ಮಧುರ ಪ್ರಕಾಶನ, ಮಂಗಳೂರು

**೧೬. ಹನೀಫ್ ಬಿ.ಎ., ೨೦೦೮**
ಬ್ಯಾರಿ ಆಂದೋಲನದ ಹೆಜ್ಜೆಗಳು, ಹಾನಾ ಪ್ರಕಾಶನ, ಮಂಗಳೂರು

**೧೭. ಹಮ್ಮೂದಾ ಅಬ್ದುಲ್ ಆತೀ, ೨೦೦೪**
ಇಸ್ಲಾಂ ಸೌರಭ, ಶಾಂತಿ ಪ್ರಕಾಶನ, ಮಂಗಳೂರು

**18. Gururaj Bhat, 1975**
Studies in Tuluva History and culture, Manipal

**19. Dr. Vasantha Madhava, 1985**
Religion in Coastal Karnataka, Nana Publication, Haleangadi

**20. Dr. Wahabhi Doddamane, 1993**
Muslims in Dakshina Kannada, Greedwards Publication, Mangalore

**21. South Canara Volume – II, 1895**
Superintendent Press

**22. Ichlangod B.M.**
Unpublished thesis Impact of Islam

**23. Karnataka State Gazetteer, 1973**

24. South Canara Gazetteer, 1938

# ಪತ್ರಿಕೆಗಳು

## ಮಾಸಿಕ ಪತ್ರಿಕೆ

೧. ಬ್ಯಾರಿ ನ್ಯೂಸ್, ೧೯೯೮, ನವೆಂಬರ್
ಬ್ಯಾರಿ ಪ್ರಕಾಶನ, ಬೆಂಗಳೂರು

೨. ಬ್ಯಾರಿ ಟೈಮ್ಸ್, ೨೦೦೩, ಡಿಸೆಂಬರ್
ಬ್ಯಾರಿ ಪ್ರಕಾಶನ, ಬೆಂಗಳೂರು

೩. ಹೊಸತು, ೨೦೦೪, ನವೆಂಬರ್
ನವಕರ್ನಾಟಕ ಪ್ರಕಾಶನ

೪. ಪೆರ್ನಾಲ್, ೨೦೦೫, ಅಕ್ಟೋಬರ್
ಜಮೀಯತುಲ್ ಫಲಾಹ್, ಮಂಗಳೂರು

೫. ಪ್ರಸ್ತುತ, ೨೦೦೭, ಆಗಸ್ಟ್
ಮಾಧ್ಯಮ ಕಮ್ಯೂನಿಕೇಶನ್ ಲಿಮಿಟೆಡ್, ಮಂಗಳೂರು

೬. ಬ್ಯಾರಿ ಟೈಮ್ಸ್, ೨೦೦೭, ಅಕ್ಟೋಬರ್
ಬ್ಯಾರಿ ಪ್ರಕಾಶನ, ಬೆಂಗಳೂರು

೭. ಬ್ಯಾರಿ ಟೈಮ್ಸ್, ೨೦೦೭, ನವೆಂಬರ್
ಬ್ಯಾರಿ ಪ್ರಕಾಶನ, ಬೆಂಗಳೂರು

೮. ಬ್ಯಾರಿ ಟೈಮ್ಸ್, ೨೦೦೮, ಜನವರಿ
ಬ್ಯಾರಿ ಪ್ರಕಾಶನ, ಬೆಂಗಳೂರು

೯. ಬ್ಯಾರಿ ಟೈಮ್ಸ್, ೨೦೦೮, ಮಾರ್ಚ್
ಬ್ಯಾರಿ ಪ್ರಕಾಶನ, ಬೆಂಗಳೂರು

೧೦. ಬ್ಯಾರಿ ಟೈಮ್ಸ್, ೨೦೦೮, ಎಪ್ರಿಲ್
ಬ್ಯಾರಿ ಪ್ರಕಾಶನ, ಬೆಂಗಳೂರು

೧೧. ಪೆರ್ನಾಲ್, ೨೦೦೮, ಎಪ್ರಿಲ್
ಜಮೀಯತುಲ್ ಫಲಾಹ್, ಮಂಗಳೂರು

೧೨. ಬ್ಯಾರಿ ಟೈಮ್ಸ್, ೨೦೦೮, ಮೇ
ಬ್ಯಾರಿ ಪ್ರಕಾಶನ, ಬೆಂಗಳೂರು

೧೩. ಪ್ರಸ್ತುತ, ೨೦೦೭, ಎಪ್ರಿಲ್

೧೪. ಪ್ರಸ್ತುತ, ೨೦೦೭, ಮೇ

೧೫. ಪ್ರಸ್ತುತ, ೨೦೦೭, ಜೂನ್

೧೬. ಪ್ರಸ್ತುತ, ೨೦೦೭, ಜುಲೈ

ವಾರ್ಷಿಕ ಸಂಚಿಕೆ

1. ದರ್ಶನ, ೨೦೦೬ – ೨೦೦೭
ಉರೂಸ್

2. ಚಂದನ, ೨೦೦೬ – ೨೦೦೭
ಬಕ್ರೀದ್ ಬಲಿದಾನ ಹೇಗಿರಬೇಕು

3. ಸುಮೇಹ, ೨೦೦೬ – ೨೦೦೭
ಇಸ್ಲಾಂ ಧರ್ಮದಲ್ಲಿ ಕ್ಷಮೆ

ಸಂದರ್ಶನದ ಮೂಲಕ ಮಾಹಿತಿ ಸಂಗ್ರಹ

1. ಅಲಿಮಮ್ಮ, ತಲಪಾಡಿ

2. ಉಮರಬ್ಬ, ಹಂಪನಕಟ್ಟಾ

3. ಜಹಿರುದ್ದೀನ್, ಕಂಕನಾಡಿ

4. ಜಮೀಲಾ, ಅತ್ತಾವರ

5. ಜೀನತ್, ಉಳ್ಳಾಲ

6. ನೂರು ಮುಹಮ್ಮದ್, ಮುಲ್ಕಿ

7. ಮುಹಮ್ಮದ್ ಮುಸ್ತಫಾ, ಮೌಲಾನಾ, ಮುಲ್ಕಿ

8. ಮುಹಮ್ಮದ್ ರಫೀಕ್, ಮೌಲಾನಾ, ಕಾರ್ನಾಡ್

9. ಸಲಾವುದ್ದೀನ್, ಮಂಗಳೂರು

10. ಶೆಹೆನಾಜ್, ಅತ್ತಾವರ

11. ಸಾರಾ ಅಬುಬಕ್ಕರ್, ಲಾಲ್‌ಬಾಗ್

ಈದ್ ಮಿಲಾದ್ ಆಚರಣೆಯಂದು ಪ್ರೊ. ಅಬ್ದುಲ್ ವಹಾಬ್ ಬುಖಾರಿ ಭಾಷಣವನ್ನೀಯುತ್ತಿರುವುದು



ಪ್ರವಾದಿ ಮುಹಮ್ಮದ್ ಪೈಗಂಬರರ(ಸ) ಜನ್ಮದಿನಾಚರಣೆಯ ದಿನ ಈದ್ಗಾ ಪ್ರಾರ್ಥನಾಲಯದಲ್ಲಿ ಭಾಷಣವನ್ನು ಕೇಳುತ್ತಿರುವ ಜನಸಮುದಾಯ



ಮೊಹರಂ ಸಮಾರಂಭದಲ್ಲಿ ಮೆರವಣಿಗೆಯ ದೃಶ್ಯ



ಉಳ್ಳಾಲ ದರ್ಗಾವು ಉರೂಸ್ ಸಮಾರಂಭಕ್ಕಾಗಿ ವಿದ್ಯುದ್ದೀಪದಿಂದ ಅಲಂಕೃತವಾಗಿದೆ



ಧಾರ್ಮಿಕ ಶಿಕ್ಷಣ ಪಡೆದ ಮೌಲವಿಗಳ ಸನದ್ (ಪದವಿ) ಸಮಾರಂಭ



ಬ್ಯಾರಿ ಮದುವೆಯಲ್ಲಿ 'ನಿಕಾ' ದ ದೃಶ್ಯ



ಮನೆಒಕ್ಕಲಿಗೆಂದು ಸಜ್ಜಾದ ಹೊಸ ಮನೆ



ಹಬ್ಬದ ಸಂದರ್ಭ ಪರಸ್ಪರ ಪ್ರೀತಿಯನ್ನು ಹಂಚಿಕೊಳ್ಳುತ್ತಿರುವ ಬಾಲಕರು



ಬಾಲಕನಿಂದ ಕುರಾನ್ ಪರಾಯಣ



ದುಆ ಮಾಡುವ ಬಾಲಕಿ



ಬ್ಯಾರಿ ಸಮುದಾಯದ ಭಕ್ತರು ನಮಾಜ್ ಮಾಡುವ ದೃಶ್ಯ



ರಮ್ಜಾನ್ ಹಬ್ಬದ ಸಂದರ್ಭ ಮುಸ್ಲಿಂ ಬಾಂಧವರು ಪ್ರಾರ್ಥನೆ ಮಾಡುತ್ತಿರುವ ದೃಶ್ಯ



